



ಎರಡನೆಯ ಎಸಳು.

# ಯೋಗ ಲಹರಿ

(ನೂರು ಖಂಡ ಕಾವ್ಯಗಳು)

ಅ. ಗೌ. ಕಿನ್ನಿಗೋಳಿ.

೧೯೫೪.



ಯುಗಪುರುಷ ಪ್ರಕಟಣಾಲಯ,
ಕಿನ್ನಿಗೋಳಿ, ದ. ಕ.

ಕವಿ- ಅ. ಗೌ. ಕಿ. ಅವರ

# 'ಕ್ಷಾತ್ರದರ್ಶನ'ದ ವಿಮರ್ಶೆಗಳು

"ಇದೊಂದು ಸೊಗಸಾದ ಕವಿತೆ. ರಚಕರನ್ನು ಮನವಾರೆ ಅಭಿನಂದಿಸುತ್ತೆ
A good play needs no epilogue ಎಂದು ಶೇಕ್ಸ್ಪಿಯರನು ಹೇಳಿ
ನೇರೆಗೆ ಒಂದು ಚಲೋದಾದ ನಾಟಕಕ್ಕೆ ಹಿನ್ನುಡಿ ಬೇಡವೆಂದಾದರೆ, ಇಂಥಾ ಸ
ಸಾದ ಕವಿತೆಗೆ ಮುನ್ನುಡಿ ಬೇಕಾಗಿಲ್ಲ. ......ಬದಿಗಣ್ಣು ಕಟ್ಟಿದ ಕುದುರೆಯಂತೆ
ಯಿಂದ ತುದಿವರೆಗೆ ಪೌರಾಣಿಕ ಕಥನದ ತುಳಿತುಳಿದ ದಾರಿಯನ್ನೇ ಹಿಡಿಯದೆ,
ಕರು ಅಲ್ಲಲ್ಲಿ ಸೀಳುಹಾದಿಗಳಲ್ಲಿ ಸಾಗಿರುವ ಹೊಸತನವಿದೆ. ......ಹೇಗೂ ಇದೊ
ತೀರ ಹೊಸ ಸನ್ನಿವೇಶ; ಜೈಮಿನಿ ಮನಗಾಣದ, ಲಕ್ಷ್ಮೀಶನು ಕನಗಾಣದ ಸನ್ನಿವೇ

—ರಾಷ್ಟ್ರಕವಿ, ಗೋವಿಂದ

"ಇದೊಂದು ಖಂಡ ಕಾವ್ಯ. ಈ ಕಾವ್ಯದ ವಸ್ತುವಿನ ಘಟನೆಗಳ ಸಂಯೋ
ಯಲ್ಲೂ ಪಾತ್ರಗಳ ನಿರ್ಮಾಣದಲ್ಲೂ ನವೀನ ದೃಷ್ಟಿಯೊಂದಿದೆ. ......ಶೋ
ಕಡಲಿನಲ್ಲಿ ಮುಳುಗಿ ಬೇಡುತಿದ್ದ ಚಿತ್ರಾಂಗದೆಯ ಚಿತ್ರಣವಂತೂ ಹೃದಯಸ್ಪರ್ಶಿ
ಗಿದೆ. ಕರುಣಾರಸ ಮೊಸರಿ ಬರುವಂತಿದೆ ಸನ್ನಿವೇಶ...... ಈ ಕಾವ್ಯದ ಶೈಲಿ
ನಿರೂಪಣಾಕ್ರಮವೂ ಉತ್ತಮವಾಗಿವೆ. ವೀರರಸವೇ ಆಗಲಿ, ಕರುಣಾರಸವೇ ಆ
ಅದು ಪಳಗಿದ ಕೈವಾಡವನ್ನು ಸೂಚಿಸುತ್ತದೆ. ಕವಿಗಳ ಆಳವಾದ ಸಾಹಿತ್ಯಾಭ್ಯ
ಈ ಕಾವ್ಯದಲ್ಲಿ ಒಡೆದು ಕಾಣುತ್ತದೆ......"

—ನವಭಾರತ, ದೈನಿಕ. ಮಂಗಳೂ

"......ಶ್ರೀ ಅ. ಗೌ. ಕಿನ್ನಿಗೋಳಿಯವರು ತಮ್ಮ ಕವಿತೆಗಳಲ್ಲಿ ಹಿಂದಿನ ವ
ಇಂದಿನ ಎರಡೂ ಸಂಪ್ರದಾಯಗಳನ್ನು ಮೈಗೂಡಿಸಿಕೊಂಡವರು. ಪ್ರ
ಕಾವ್ಯಕ್ಕೂ ಅದೇ ಮಾತು ಅನ್ವಯಿಸುತ್ತದೆ. ಕಾವ್ಯದ ಮನೋಜ್ಞತೆಯನ್ನು ಹೆಚ್
ವುದೇ ಕವಿಯ ಲಕ್ಷ್ಯವಾಗಿರಬೇಕಲ್ಲದೆ, ಸಂಪ್ರದಾಯ ಮೋಹವಲ್ಲ- ಎಂಬುದ
ಈ ಲೇಖಕರು ಚೆನ್ನಾಗಿ ತಿಳಿದವರು. ಭಾವಾಭಿವ್ಯಂಜನೆಗೆ ಅನುಗುಣವಾದ
ಛಂದಸ್ಸನ್ನು ಸ್ವತಂತ್ರವಾಗಿ ಬೇಕಾದಂತೆ ಆರಿಸಿಕೊಂಡುದರಿಂದ ಈ ಕಾವ್ಯವು ತು
ಪ್ರಭಾವಶಾಲಿಯಾಗಿದೆ. ......ಒಟ್ಟಿನಲ್ಲಿ ಈ ಕೃತಿಯು ಆಧುನಿಕ ಕಾವ್ಯಗಳಲ್ಲಿ ಒ
ಪ್ರಾಮುಖ್ಯ ಸ್ಥಾನ ಪಡೆಯುವುದರಲ್ಲಿ ಸಂದೇಹವಿಲ್ಲ. ಕಾವ್ಯದ ಅಚ್ಚುಕಟ್ಟೂ, ಸ
ವಾದ ಕತೆಗಾರಿಕೆಯೂ ಸೇರಿಕೊಂಡಿರುವುದು ಈ ಕಾವ್ಯದ ವೈಶಿಷ್ಟ್ಯ......"

—ರಾಷ್ಟ್ರಮತ. ಮಂಗಳೂ

ಎರಡನೆಯ ಎಸಳು.

# ಯೋಗ ಲಹರಿ

(ಮೂರು ಖಂಡ ಕಾವ್ಯಗಳು)

ಅ. ಗೌ. ಕಿನ್ನಿಗೋಳಿ.

೧೯೫೪.

ಯುಗಪುರುಷ ಪ್ರಕಟಣಾಲಯ,

ಕಿನ್ನಿಗೋಳಿ, ದ. ಕ.

ಸಂಪಾದಕರು:

ಕೊ. ಅ. ಉಡುಪ.

ಅ. ಗೌ. ಕಿನ್ನಿಗೋಳಿ





ಕ್ರಯ: ರೂ. ೧—೦—೦





ಪ್ರಕಾಶಕರು:

ಕೊಡತ್ತೂರು ಅನಂತ ಪದ್ಮನಾಭ ಉಡುಪ

ಯುಗಪುರುಷ ಪ್ರಕಟಣಾಲಯ,

ಕಿನ್ನಿಗೋಳಿ, ದ. ಕ.

ಮುದ್ರಕರು:

ಮುಲ್ಕಿ ಪ್ರಿಂಟಿಂಗ್ ಪ್ರೆಸ್, ಮುಲ್ಕಿ, ದ. ಕ.

# ಮುನ್ನುಡಿ

'ಯೋಗ ಲಹರಿ'ಯಿದು ಮೂರು ಖಂಡ ಕಾವ್ಯಗಳ ಸಂಗ್ರಹ. ಇದನ್ನು ಈ ರೂಪದಲ್ಲಿ ಕಾಣುವ ಸು-ಯೋಗ ಲಭಿಸಿದ್ದಕ್ಕಾದರೂ ಸರಿ, ಇದರಲ್ಲಿರುವ ವಸ್ತುಗಳು ಯೋಗ ಸಂಬಂಧಿಯಾಗಿವೆ ಎಂಬುದಕ್ಕಾದರೂ ಸರಿ; ಅಂತೂ ಲಹರಿ ಹರಿದಿದೆಯಾದರೆ ಸಾಕು.

ಇವುಗಳಲ್ಲಿ ಎರಡರ ಕುರಿತು ನಾನು ಹೇಳಲೇಬೇಕಾದ ಒಂದೊಂದು ಮಾತಿದೆ:-

೧. ಸಿದ್ಧಾರ್ಥನು ಬುದ್ಧನಾದ ಬಳಿಕ ಕೆಲವು ವರ್ಷಗಳ ಮೇಲೆ ತನ್ನ ಹುಟ್ಟೂರಾದ ಕಪಿಲವಸ್ತುವಿಗೆ ಬಂದಿದ್ದನು. ಆಗ ಸರ್ವರೂ ಹೋಗಿ ಭಗವಂತನ ದರ್ಶನ ಪಡೆದು ಧನ್ಯರೆನಿಸಿಕೊಂಡರೂ ಯಶೋಧರಾದೇವಿ ಮಾತ್ರ ಹೋಗಲಾಗದುದರಿಂದ, ಆ ಲೋಕಗುರುವೇ ಈ ಸಾಧ್ವೀಮಣಿಯ ಅಂತಃಪುರಕ್ಕೆ ಬಂದು ಭಿಕ್ಷೆ ಸ್ವೀಕರಿಸಿದ್ದನಂತೆ. ಹೀಗೆಂದು ಇತಿಹಾಸವಿದೆ. 'ಮೊದಲ ಭಿಕ್ಷುಣಿ'ಯ ಮೂಲವಸ್ತುವೂ ಇಷ್ಟೇ.

ಮಾನ್ಯ ಮಾಸ್ತಿಯವರ ಯಶೋಧರಾ ಎಂಬ ನಾಟಕವನ್ನು ಓದಿದ್ದರ ಪ್ರಭಾವ ನನ್ನ ಈ ರಚನೆಯಲ್ಲೂ ಭಾವದ ಸುಳಿವಾಗಿ ನಾಲ್ಕೈದು ಎಡೆಗಳಲ್ಲಿ ಹರಿದಿರುವುದು. ಮಾತ್ರವಲ್ಲ ಮೊದಲ ಭಿಕ್ಷುಣಿ- ಎಂಬ ನುಡಿಯೂ ಆ ನಾಟಕದಲ್ಲೆಲ್ಲೋ ಒಂದೆಡೆ ಬಂದ ಮಾತೇ ಆಗಿರುವುದು. ಇಷ್ಟನ್ನು ಹೊರತು ಬೇರೆಲ್ಲವೂ ನಾನೇ ಮಾಡಿರುವ ಪ್ರಮಾದ. ಈ ಬಗ್ಗೆ 'ಶ್ರೀನಿವಾಸ'ರಿಗೆ ನಮ್ರ ವಂದನೆಗಳು.

೨. ಶ್ರೀ ಕಡೆಂಗೋಡ್ಲು ಶಂಕರ ಭಟ್ಟರ 'ಮಾದ್ರಿಯ ಚಿತೆ'ಯನ್ನು ನಾನು ಓದಿದ್ದಂದಿನಿಂದ ಅದೇ ವಸ್ತುವನ್ನು ಕೇವಲ ಕಥಾತ್ಮಕವಾಗಿ, ಘಟನೆಗಳಿಗೇ ಹೆಚ್ಚಿನ ಮಹತ್ವ ಕೊಟ್ಟು ವಿವರವಾಗಿ ಚಿತ್ರಿಸಬೇಕೆಂದು ಎಣಿಸಿದ್ದೆ. ತೊಡಗಿಯೂ ತೊಡಗಿದ್ದೆ. ಅದು ಕೊನೆಗೊಳ್ಳುವಾಗ 'ಚಿತಾಗ್ನಿ'ಯಾಗಿ ಈ ರೂಪಕ್ಕೆ ಬಂತು. ಕಥನ ರೀತಿಯಲ್ಲಾಗಲೀ, ಸನ್ನಿವೇಶಗಳ ಹೊಂದಿಕೆಯಲ್ಲಾಗಲೀ ಇದು 'ಮಾದ್ರಿಯ ಚಿತೆ'ಗಿಂತ ತೀರಾ ಭಿನ್ನವಾಗಿರುವುದಾದರೂ, ಇದರ ಒಂದನೆಯ ಭಾಗದ ಪಾಂಡುವಿನ ಸ್ವಗತೋಕ್ತಿಯಲ್ಲಿ ಆ ಮೊದಲ ಕೃತಿಯ ಭಾವದ ನೆರಳು ಅಲ್ಲಲ್ಲಿ ಹಾಯ್ದಿರುವುದನ್ನು ಅವಶ್ಯವಾಗಿ ಗಮನಿಸಬೇಕೆಂದು ಬಿನ್ನವಿಸುವೆ. ಅಂತೆಯೇ ಶ್ರೀ ಕಡೆಂಗೋಡ್ಲು ರವರಿಗೂ ಋಣಿಯಾಗಿರುವೆ.

ರಚನೆಯ ಕಾಲದ ದೃಷ್ಟಿಯಿಂದ ಇವು ಎಂದೋ ಸಂಗ್ರಹವಾಗಿ ಬರಬೇಕಿತ್ತು. ಇಂದಾದರೂ ಇದು ಬರುತ್ತಿರುವುದಕ್ಕೆ 'ಯುಗಪುರುಷ'ದ ಪ್ರಕಾಶಕರೂ ಸಂಪಾದಕರೂ ಆಗಿರುವ ಶ್ರೀ. ಕೊ. ಅ. ಉಡುಪರ ಸ್ನೇಹ-ಔದಾರ್ಯಗಳೇ ಕಾರಣವಲ್ಲದೆ ಬೇರೆಯಲ್ಲ. ನನ್ನ ಬರೆಹಗಳನ್ನೆಲ್ಲ ಅವರು ತನ್ನದೇ ಎಂಬಷ್ಟು ಆತ್ಮೀಯತೆಯಿಂದ ಬರ

ಮಾಡಿಕೊಂಡಿರುತ್ತಾರೆ. ಅವರಿಗೆ ನಾನು ಚಿರಋಣಿ- ಎಂಬ ಮಾತಿಗಿರುವ ಸಹಜ
ದಲ್ಲಿ ಋಣಿಯಾಗಿರುತ್ತೇನೆ. ಈ ಸಂಗ್ರಹದಲ್ಲಿಯ ಮೂರೂ ಕವಿತೆಗಳು ಒಮೊ
ಯುಗಪುರುಷ ಮಾಸ ಪತ್ರಿಕೆಯಲ್ಲಿ ಬೆಳಕನ್ನು ಕಂಡವುಗಳೇ.

ಗೆಳೆಯರಾದ, ಕವಿ- ಶ್ರೀ ಕೈಯಾರ ಕಿಞ್ಞಣ್ಣ ರೈ ಮೊದಲಾದ ಸಹೃದಯಿ
ಇವುಗಳ ಯೋಗ್ಯತೆಗೆ ಮೀರಿದ ವಿಮರ್ಶೆ- ಪ್ರಶಂಸೆಗಳನ್ನು ನೀಡಿ ಈ ಮೊದಲೇ
ದುಂಬಿಸಿರುವುದನ್ನೂ ಇಲ್ಲಿ ಕೃತಜ್ಞತೆಯಿಂದ ನೆನೆಯದಿರಲಾರೆ.

ನನ್ನ 'ಕ್ಷಾತ್ರದರ್ಶನ'ಕ್ಕೆ ಎಲ್ಲೆಡೆಗಳಲ್ಲೂ ಆದರದ ಸ್ವಾಗತ ಸಿಕ್ಕಿದೆ.
ಬಗ್ಗೆಯೂ ಅದೇ ನಿರೀಕ್ಷೆ.

ಸುಂದರವಾಗಿ ಮುದ್ರಿಸಿಕೊಟ್ಟ ಮುಲ್ಕಿ ಪ್ರಿಂಟಿಂಗ್ ಪ್ರೆಸ್ಸಿನವರು ಅಭಿ
ನೀಯರು.

ಅ. ಗೌ.

# ಪ್ರಕಾಶಕರ ಎರಡು ಮಾತು.

'ಯೋಗಲಹರಿ'ಯು ನಮ್ಮ ಪ್ರಕಟಣಾಲಯದ ಎರಡನೆಯ ಎಸಳು.

ಮೊದಲ ಮುತ್ತಾದ 'ಕ್ಷಾತ್ರದರ್ಶನ'ಕ್ಕೆ ಎಲ್ಲೆಡೆಗಳಿಂದಲೂ ಆದರ ಪ್ರೋತ್ಸಾಹಗಳು ಲಭಿಸಿವೆ. ಅದರ ರಚಕರಾದ ಗೆಳೆಯ ಶ್ರೀ ಕಿನ್ನಿಗೋಳಿಯವರೇ ಈ ಕೃತಿಯನ್ನೂ ಇತ್ತು ಉಪಕರಿಸಿದ್ದಾರೆ.

ಅಂದವಾದ ಮುದ್ರಣಕ್ಕೆ ಮುಲ್ಕಿ ಪ್ರಿಂಟಿಂಗ್ ಪ್ರೆಸ್ಸಿನವರಿಗೆ ಅಭಿನಂದನೆಗಳು ಸಲ್ಲಲೇ ಬೇಕು.

ಕಿನ್ನಿಗೋಳಿ,
೧೫—೮—'೫೪.

ಕೊ. ಅ. ಉಡುಪ.

## ಕಣ್ತಪ್ಪಿದ ನುಡಿಗಳು.

| ಪುಟ | | | ಪಾದ | | ನುಡಿ |
|---|---|---|---|---|---|
| ೧ | .... | .... | ೩ | .... | ಅಂತಃಪುರವು; |
| ೭ | .... | .... | ೧ | .... | ಸಾನ್ನಿಧ್ಯ |
| ೧೫ | .... | .... | ೪ | .... | "ತನ್ನ ತಾನೇ |
| " | .... | .... | ೫ | .... | ಹಲವಾಮಿಷಗಳ |
| " | .... | .... | ೭ | .... | ಹಲ್ಲಣಿಗೆಯೆನೆ |
| " | .... | .... | ೮ | .... | ಸ್ಟೈರಣೆಯ |
| ೧೬ | .... | .... | ೪ | .... | ನೌಕೆಯನೊ |
| " | .... | .... | ೭ | .... | ಕಣ್ಣ |
| " | .... | .... | ೧೬ | .... | ನಿಡುವುದಕು |
| ೨೫ | .... | .... | ೪ | .... | ನೇಸರನ ಚೆಂಗದಿ |
| ೨೮ | .... | .... | ೪ | .... | ಆತನೇಥ |
| " | .... | .... | ೧೬ | .... | ಅರಿವುದೆಂತು ಆಕೆ |
| ೨೯ | .... | .... | ೧೮ | .... | ಸರಿಯುಗೊಳಿಸಿ, |
| ೩೦ | .... | .... | ೨೦ | .... | ನಿಷ್ಠೆಯಾದಿ. |

### ಪರಿವಿಡಿ



*"Hear, see and feel, in faith's simplicity"*

— Brown

# ಮೊದಲ ಭಿಕ್ಷುಣಿ

೧

ಪ್ರಾಲೇಯ ಗಿರಿತಟದ ಕಪಿಲವಸ್ತುವಿನಲ್ಲಿ
ಶುದ್ಧೋಧನರಸನರಮನೆಯೊಂದು ಸೌಧದಲಿ
ಅಂತಃಪುರವು; ಅಲ್ಲಿ ದೊರಗುಮಂಚದ ಮೇಲೆ
ಅಂಗೈಯ ತಳದಿ ಗಲ್ಲವನಿಟ್ಟು, ನಿಡುಧಾರೆ-
ಯಾಗಿ ಕಣ್ಣೀರಿಟ್ಟು, ಕಾವಿವಸನವನುಟ್ಟು,
ತನ್ನಾಣ್ಮ ಭಾಗ್ಯಭಾಸ್ಕರನ ಬರವನು ಕಾದು
ತನ್ಮಯಂಗೊಂಡು ಜಾನದೊಳೊರಗಿದಾ ಸಾಧ್ವಿ
ಸಂಜೆವೆಣ್ಣೋ? ರಾಯದಾವರೆಯೊ? ಕುಳಿತಿಹಳು;
ಕೋಸಲದ ಯುವರಾಜನಿನಿಯೆ, ನಲುಮೆಯ ಚೆನ್ನೆ,
ಸಿದ್ಧಾರ್ಥನರಸಿ, ಹದಿಬದೆ, ಯಶೋಧರೆ ಮಾನ್ಯೆ!

ಹತ್ತು ವರುಷದ ಹಿಂದಿನೊಂದು ನಟ್ಟಿರುಳಲ್ಲಿ:-
ಕೈವಿಡಿದ ಕೋಮಲೆ ಯಶೋಧರೆಯನೂ, ಕಂದ
ನಚ್ಚಿನಚ್ಚಿಯ ರಸವೆ ರೂಪೊಡೆದ ರನ್ನ—ಹಾ!
ಲೋಕವನೆ ಸೆರೆಗೊಂಬೆನೆಂಬ ಕಣ್ಣನಗೊಂಬೆ,
ಹಾಲುಗಲ್ಲದ ಹಸುಳೆ ರಾಹುಲನನೂ; ಸುಖದ
ಸೆಜ್ಜಾರದಲಿ ಬಿಟ್ಟು, ಕರಣಗಳನುಡಿದಿಟ್ಟು,
ತಪಕಾಗಿ— ತನ್ನವರ ಸಂತಾಪದಲಿ ಕೆಡವಿ
ಕಾಡದಾರಿಯ ಹಿಡಿದು ನಡೆದಿರ್ದ ಸಿದ್ಧಾರ್ಥ
ಸರ್ವ ಬಂಧವ ಕಡಿದು ವನಮಧ್ಯದಲಿ ಕುಳಿತು
ಯೋಗದಿಂದೆಚ್ಚರಂಗೊಳಲು ಗುರುವರ—ಬುದ್ಧ!

ಸ್ಪರ್ಶಮಾತ್ರದೆ ಲೋಹಗಳನು ಹೊನ್ನಾಗಿಸುವ
ಪರುಷಮಣಿಯಂತೆ, ಭವ ಭವ ನಾಗ-ದಂಶನಕೆ
ಗರುಡ ಮಣಿಯಂತೆ, ಕಂಗಾಣದಿಹ ಕಾರಿರುಳ
ತಮದ ಕೊತ್ತಳವೆಂಬ ತಿರೆಗೆ ದಿನಮಣಿಯಂತೆ;
ಎಲ್ಲೆಲ್ಲು ಭಕ್ತರುದ್ಧಾರ, ಜನಜನದ ಮನ
ಜಂಜಡದ ಪರಿಹಾರ, ಜಾರುವವರಾಧಾರ–
ಕರ್ತೃ, ಆ ಕೈವಲ್ಯದಾತನು ಯಶೋಧರೆಯ
ನಾಥನು, ಪುರಾಗಮನ ಪಥವಿಡಿದು ಬರುತಿರಲು
ವಾರ್ತೆ ಮುಟ್ಟಿತ್ತು ಶುದ್ಧೋಧನಗೆ, ಸತಿಮಣಿಗೆ,
ರಾಜಧಾನಿಗೆ, ಊರು ಊರಿಂಗೆ ಕೇರಿಂಗೆ.

ಆಣ್ಮ ಬರುತಿಹರೆಂಬ ಸುದ್ದಿ ಕಿವಿದೆರೆಗಳಿಗೆ
ಬಿದ್ದಿತೋ ಶೂನ್ಯ ಸಿಡಿದೆದ್ದಿತೋ– ಅರೆಗಳಿಗೆ
ಸ್ತಬ್ಧ, ಮಾತಿಲ್ಲ; ಸಂತೋಷವೋ ದುಃಖವೋ
ತಿಳಿಯಲಾಗದು! ಹೊನ್ನ ಚೌಕಟ್ಟಿನಲ್ಲಿರುವ
ತನ್ನ ನಲ್ಲನ ಚಿತ್ರಫಲಕವನ್ನೆದೆಯಪ್ಪಿ
"ಸ್ವಾಮಿಯೇ ದಯೆದೋರಿದೆಯ?"– ಎಂದು ಬಿಕ್ಕಳಿ
ಕೊನೆಗೆ ಭೋರೆಂದತ್ತಳಕಟಕಟ! ತಡೆಯದೇ
"ತಾನೆ ಮುಂದೋಡಿ ಬಿಗಿದಪ್ಪಿಕೊಳುವೆನೆ"– ಎಂಬ
ತಾಣಕೂ ಬಂದಿತಾಕೆಯ ತವಕ! ಆದರೇಂ?
ಸನ್ಯಾಸಗೊಂಡ ಪತಿಯನು ಕಾಣುವುದು ಸತಿಗೆ
ಶಾಸ್ತ್ರ ಸಮ್ಮತವಲ್ಲ; ಅಯ್ಯಯ್ಯೊ ದುರ್ವಿಧಿಯೆ!!

× × × ×

ಹಿಂದೊಮ್ಮೆ ತನ್ನ ಸೌಭಾಗ್ಯರೇಖೆಯನೋರೆ
ಗೈದಿತ್ತು ಕನಸೊಂದು.– "ಭೂವ್ಯೋಮಗಳ ಹಬ್ಬಿ
ಭೂರುಹವು ತನ್ನೊಂದು ಬೀಳಲಿಂದಾಣ್ಮನನು
ಸುತ್ತಿ ಆಗಸಕೆತ್ತಿ ಹಿಡಿಯೆ, ದೇಹಾಕೃತಿಯು

ಮುಸುಕಾಗಿ ಕೊನೆಗೆ ಮಾಯವೆ ಆಗಿ, ಅಲ್ಲೊಂದು
ಬೆಳ್ಳಿ ಮೂಡಿತು; ಬೆಳಗಿ ಥಳಥಳಾಗಿ ತೊಳಗಿತ್ತು!''
ಚಿಟ್ಟೆಂದು ಚೀರಿ ಪಲ್ಲಂಗದಿಂದೊಡನೆದ್ದು
ಪಕ್ಕದಲಿ ನೋಡಿದರೆ ಪ್ರಾಣೇಶನಿರಲಿಲ್ಲ!
ಮೊನ್ನೆಯೇ ಮತ್ತೊಂದ ಮರಳಿ ಕಂಡಿಹಳಂತೆ;
ಹಿಂದಣಿನ ದುಷ್ಫಲವ ಮುನ್ನಡೆಸಿ ತಂದಂತೆ.

"ತನ್ನ ತೊಡೆಯಿಂದೊಂದು ಕಿರುವೆಳಗು ಮೇಲೆದ್ದು
ನೀಲಾಗಸವನೇರಿ ಧ್ರುವತಾರೆಯನು ಸೇರಿ
ಒಂದಾಗಿ ಬೆಳ ಬೆಳಗಿ ತನ್ನನೂ ಕರೆದಿತ್ತು!"
ಇದಕೆ ಇನ್ನಾವ ದುಷ್ಫಲವು ಕಾದಿಹುದೆಂದು
ತತ್ತರಿಸಿ ನಿದ್ದೆ ಬಾರದೆ ದೇವಿ ಮರುಗುತಿರೆ,
ಹೊತ್ತಾರೆಯೇ ಮುದ್ದು ರಾಹುಲನು ಬಳಿಬಂದು
ಹೆತ್ತಯ್ಯನೆಲ್ಲಿಹನು ಹೇಳಮ್ಮ ಹೇಳೆಂದು
ಹತ್ತು ವರುಷದ ಕಂದ ಛಲವಿಡಿದು ಕಾಡಿದನು;
ಕಂದನನು ಎದೆಗಪ್ಪಿ ಕಣ್ಣೀರ ಸುರಿಸುತ್ತ
ಮಾವನಡಿಯಲಿ ಕೆಡೆದು ಒರೆದಿರ್ದಳೆಲ್ಲವನು.

ವೃದ್ಧ ಶುದ್ಧೋಧನನು ಸಮತೆಯಾನದಿ ಮನವ
ನಿಲ್ಲಿಸುವ ನಡೆಯಿಸುವ ನೆಲೆಗೆ ಮುಟ್ಟಿದ ಮಹಿಮ!
ಆದರೂ ಸೊಸೆಯ ಕನಸಿನ ಆಗು-ಹೋಗುಗಳ
ಹೋದ ಕಾಲದ ಬಸುರಿನಿಂದೊಗೆದ ಅಳಲುಗಳ
ಅರಿದು ಚಣಕಾಲ ತತ್ತರಿಸಿ ತೊಳಲಿದ್ದನೆನೆ
'ಅತಿ ಸ್ನೇಹದಲಿ ಪಾಪಶಂಕೆಯಿದೆ'- ನಿಜ ತಾನೆ!
ಮುಂಬರುವ ದುಷ್ಫಲವನಿಂದೆ ಜಾನಿಸಿ, ಧೃತಿಯು
ಇಂಬುಗೆಡಿಸಲು ಬಾರದೆಂದು ಸ್ಥೈರಣೆಗೊಂಡು
ನಂಬಿಕೆಯ ಭಟರೊಡನೆ ವೃದ್ಧ ನಾಸೆಯುನರುಹಿ
ಬುದ್ಧನಿರುವೆಡೆಗೆ ಸಂದೇಶಕಳುಹಿದ್ದನು.

“ಬಂದು ನೋಡಲು ಬೇಕು ಮುದಿಯನಾಕಾಂಕ್ಷೆಯಿದೆ,
ನೊಂದ ಹಳಿಜೀವವನು ಸಂತೈಸಿ ದಿನವಿದ್ದು
ಹಿಂದೆರಳಬಹುದಯ್ಯೊ ತಡೆಯಲಾರೆವು ತಂದೆ!
ಮಂಗಳಾಂಗಿಯು ನಿತ್ಯ ಕಣ್ಣೀರು–ಎದೆಯಾಸೆ,
ಕಂದ ಕಾಡುವ ಪೃಚ್ಛೆ, ಪರಿವಾರದವರಾಸೆ,
ಕೇರಿಕೇರಿಯು ಊರು ಊರುಗಳು, ದೇಶವೇ
ಕಾದಿಹೆವು ಎಂದಿನಿಂದಲು ಕಾದೆ ಕುಳಿತಿಹೆವು”–
ಎಂಬ ಗುರುಜನದ ಸಂದೇಶದಾಸೆಯ ಕೇಳಿ
ಬುದ್ಧ ಭಗವಂತನಾನಂದ ಶಿಷ್ಯನ ಕೂಡಿ
ನೂರು ಯೋಜನ ದೂರ ನಡೆದು ಬಂದಿದ್ದರು.

× × × ×

ನೆರೆದಿಹರು ಹಿರಿಕಿರಿಯರೆಲ್ಲ ಹೆಣ್ಗಂಡೆಲ್ಲ.
ಪಂಚಮರು, ವೇಶ್ಯೆಯರು, ಮೇಲು ಕೀಳೆಂದಿಲ್ಲ,
ಬಡವ ಬಲ್ಲಿದರಿಲ್ಲ, ಊರಿಗೂರೇ ಕೂಡಿ
ಹರಕೆಯನು ಕೊಳಲೆಂದು ಜಯಕಾರಗಳ ಹಾಡಿ
ತಣಿಯದಿರೆ; ಭಗವಂತ ಒಂದುವೊಂದೇ ನೋಟ,
ಕರುಣಾಕಟಾಕ್ಷ, ಆತ್ಮೀಯಭಾವದ ದಿಟ್ಟಿ,
ಎಲ್ಲರನ್ನೆದೆಯೊಳಗೆ ಹೊಗಿಸುವಂತಿಹ ಕಾಣ್ಕೆ,
ತಬ್ಬಿಕೊಳುವಂತೆಸೆವ ತೆರೆದ ಕೈಗಳ ಹರಕೆ,
ಬಂಧುಗಳೆ ಸೌಖ್ಯವೇ?– ಎನುವ ಮಂದಸ್ಮಿತವು;
ಆಹ! ಗೌತಮಬುದ್ಧ – ಗುರುದೇವ – ಬರುತಿಹರು.

ದೇವಿ ಅಂತ ಪುರದಿ ಕಣ್ಮುಗಿದು ಕೈಮುಗಿದು
ಭಾವನೆಯ ದಿಟ್ಟಿಯನು ತೆರೆದು ಜಾನಿಸುತಿಹಳು.
ಕಳೆದ ತನ್ನಯ ಬಾಳ ಕಿರುದೊರೆಯು ಹೊನಲಾಗಿ
ಹರಿದ ಹಿಂದಿನ ದಿನವನೀಗ ನೆನೆಯುತ್ತಿಹಳು.
“ಪ್ರಾಣವೇ ಪತಿಯೆಂದು ನಂಬಿದ್ದ ಸತಿಯನ್ನು

ತೊರೆದು ಜಾರಿದ ನಾಥ- ಎನ್ನೊಡನೆ- ಲೋಕವನು
ತೊರೆದರೆಂದೇ ಭಾವಿಸಿರ್ದೆನಾದರೆ ಈಗ
ಲೋಕವನೆ ಕಟ್ಟಿಕೊಂಡಿಹರೆನ್ನ ಬಿಟ್ಟಿಹರು!
ಸರ್ವ ಸುಖಕೂ ಎನ್ನ ಜೊತೆಯಾಗಿ ಕರೆದವರು
ಮೋಕ್ಷಮಾರ್ಗದೊಳೆನ್ನ ಕೈಬಿಟ್ಟು ತೆರಳಿದರು!

ಅಂದು ಅರಮನೆಯಲ್ಲಿ ಎಮ್ಮ ನಲುಮೆಯ ಹಾಲು-
ಗಡಲುಕ್ಕಿ ಹರಿದೆನ್ನ ನಾಥನೀಸಾಡುತಿರೆ;
ಬಂದವರು, ದರ್ಶನಾಕಾಂಕ್ಷಿಗಳು, ದಿನವುಳಿದು
ಹೊತ್ತು ಸಾಧಿಸಿ ಕಾದು ಮುನ್ನಪ್ಪಣೆಯ ಪಡೆದು
ಬಿಟ್ಟಿಯಾದವರು, ಅರಗುವರ ಬರುತಿಹರೆಂದು
ಭಕ್ತಿಯಲಿ ದೂರ ಸರಿದವರು, ದೂರದೆ ನಿಂದು
ಮುಚ್ಚುಗೈ ವಂದನೆಯನಿತ್ತವರು, ಎಲ್ಲರೂ
ಸ್ವಚ್ಛಂದವಾಗಿ ನೋಡುವರು ಪಾಡುವರೆಂದು;
ಯಾರ ಬಾಳಿನ ಕತೆಯನೋ ದೂರದಲಿ ನಿಂದು
ಕೇಳುವವರಂತೆನ್ನ ಗತಿಯಾಯ್ತು, ಹಾ! ವಿಧಿಯೆ!

ನಲುಮೆ ಬೆಳಗಿತು-ನಂದಲಿರುವ ದೀವಿಗೆಯಂತೆ!
ಬಾಳ ಗೆಳತಿಯೆ ಅಲ್ಲ, ಪ್ರಾಣದಚ್ಚೇ ಆಗಿ
ಗೂಡು ಕಟ್ಟಲು ಬಂದ ಜೋಡು ಗುಬ್ಬಿಗಳಂತೆ
ಉದ್ಯಾನ, ಜಲಕೇಳಿ, ಸಂಚಾರ, ಭೋಜನವು,
ವಿಶ್ರಾಮ, ನಿದ್ರೆ, ವಿಧವಿಧವಿಲಾಸಗಳಲ್ಲಿ
ವಿಹರಿಸಿರೆ ಎನ್ನಿಚ್ಛೆಯನೆ ಮೊದಲು ಕಂಡವರು!
ಅವರ ತೋಷದೊಳಾನು ಹಿಗ್ಗಿ ಮುದಗೊಂಡವಳು
ಕಾಣಲಾಗದ ಪಾಪಿಯಾಗಿ ಕುಳ್ಳಿಹೆನಿಲ್ಲಿ!
ಅಂದಿನಸ್ಮರೆ ಎಲ್ಲರಿಂದು ಆಣ್ಮನ ಮುಂದೆ:
ಒಂದಾಗಿ ಬಾಳಿದ್ದ ಜೀವ ಎಲ್ಲರ ಹಿಂದೆ!

ಬರುತಿಹುದು ಬರುತಿಹುದು ಹಿಂದಿನೆಮ್ಮಯ ಚೆಲುವ
ಬಾಳ ಬೋಗುಣಿಯನ್ನು ತುಂಬಿ ಚೆಲ್ಲಾಡಿದ್ದ
ರಸದಿಂಪು, ರುಚಿಯಾಗಿ ಹೀರಿದ್ದ ಸವಿನೆನಪು!
ಕ್ರೂರ ವೈರಾಗ್ಯ ರಾಕ್ಷಸನ ಕಾಲ್ತುಳಿತಕ್ಕೆ
ಸೋರಿ ಹೋಯಿತು ರಸವು, ಒಡೆದು ತುಂಬಿದ ಪಾತ್ರೆ!
ಸಾರವಿತ್ತೆಮ್ಮ ಸಂಸಾರ; ನಲುಮೆಯ ಗಾನ
ಮೇಳತಾಳಗಳಿತ್ತು, ಜೀವನರ್ತನವಿತ್ತು,
ಬಾಳಿಂಗದೇ ಸುಗ್ಗಿಯೆಂಬೆಣಿಕೆಯೊಳು ಹಿಗ್ಗಿ
ಕಾಲವನು ಕಳೆಯುತಿರೆ ಸೋರೆಯನ್ನೊಡೆದೆಸೆದ
ಮುರುಕು ವೀಣೆಯೊಲೆನ್ನ ಬದುಕು ಬಿದ್ದಿತು ಚೆಲ್ಲಿ!

> ಹೊನ್ನ ಪಂಜರದ ಶಾರಿಕೆ ನುಡಿವ ಮೆಲ್ಲುಲಿಗೆ–
> ಅಂದೊಮ್ಮೆ ಸರಸ ಮೋಡಿಯೊಳೆನ್ನ ಹೃದಯೇಶ
> ಸುಲಿದ ಬಿಂಬಾಫಲವ ತಿನ್ನೆಂದು ನಸುನಗುತ
> ಗಿಳಿಯು ತುಂಡದೊಳೆನ್ನ ತುಟಿಗಚ್ಚಿಸಿದ ನೆನಹು!
> ಉದ್ಯಾನದೆಡೆ ನಡೆವೆನೇ–ಸ್ವಾಮಿಯೆಂದೆನ್ನ
> ಕೈವಿಡಿದು ನಡೆಯೆ ಬಗೆಯೊಲಿದ ಮೆಚ್ಚಿನ ತಾಣ!
> ಅಲ್ಲೆ, ಆ ಮಲ್ಲಿಗೆಯ ಮಂಟಪದ ಮಗ್ಗುಲಲಿ,
> ಎಮಗಾಗಿ ಕೆತ್ತಿಸಿದ ಹಾಲುಗಲ್ಲಾಸನವು;
> ತಂಗೊಳದ ತಡಿಯಲ್ಲೆ ಗುಪ್ತ ಕೇಳೀ ಗೃಹವು!
> ಮರೆವ ಯತ್ನಕೆ ಸೋಲ ಬೆಸೆಯುವುದು ಹಳೆನೆನ

ಯಾವ ಪಾಪದ ಬಿತ್ತು ಮೊಳೆಯಿತೆಂದರಿವೆನೇ?
ಯಾವ ಜನುಮದಿ ಯಾರ ದಾಂಪತ್ಯದೆರಕವನು
ಒಡೆದಿದ್ದೆನೋ ತಿಳಿಯೆ! ಆಯುಷ್ಯ ಮುಗಿಯದಿದೆ!
ಅರ್ಥವಿಲ್ಲದ ಬದುಕಿನೀ ಅಣಕ ಮಾಡಲಿಕೆ,
ಅರಮನೆಯ ಸೌಭಾಗ್ಯಗಳ ವಿಕಟ ಗಹಗಹಿಕೆ,
ಏನ ನೋಡಲಿ? ಯಾವ ಆಸೆಯಲಿ ಬಾಳಿರಲಿ?

'ಸಂನ್ಯಾಸಗೊಂಡು ಪತಿಸಾನ್ನಿಧ್ಯಕ್ಕೈದುವೆನು'-
ಎಂದು ಬೇಡಿದ್ದೆನಂದೇ ಮಾವನಡಿಗೆರಗಿ!
ಹಡೆದ ಕಂದನ ಕಳೆದುಕೊಂಡ ಮುಪ್ಪಿನ ಜೀವ,
ಕಣ್ಣೀರ ತುಂಬಿ ಗದ್ಗದರಾದರೀ ಮಾವ!

"ಜರೆಯ ಭಾರದ ಹೊರೆಯ ಹೊತ್ತು ಬಾಗಿದ ಎನ್ನ
ಕೊನೆಯುಸಿರ ಕಾಲಕ್ಕೆ ದಕ್ಕಿದೀ ಸಂಸಾರ
ಗತಿಯ ಕಾಣೆಲೆ ತಾಯಿ, ಆರಿಹರು ಎನಗಿಂದು?
ಕೈವಿಡಿದು ಬಂದವಳು ಮೊದಲೆ ಕೈಬಿಟ್ಟಿಹಳು;
ಕಂದನನು ನೆನೆದರೇ ಕೊರೆದಂತಹುದು ಕರುಳು!
ನಿನ್ನನೂ, ಎಮ್ಮ ವಂಶದ ಕುಡಿಯ ರಾಹುಲನ,
ಕಂಡಾದರೂ ಸೈರಿಪೆನು ಕೊನೆಯ ಗಳಿಗೆಯನು;
ನಿನ್ನೆಡೆಗೆ ನಿನ್ನಾಣ್ಮ ಬಂದೇ ಬರುವನಮ್ಮ!"
ಎಂದ ಹಿರಿಯರು ಮನವ ನೋಯಬಾರದು ಎನುವ
ನೆಲೆಯರಾಂತು, ಕಹಿಬೇವ ನುಂಗಿನುಂಗಿದೆ ನೋವ.

ಕಂದನಿದಿರೈತರಲು ನೆನಹು ಮರುಕೊಳಿಸುವುದು!
ಎನ್ನ ಸ್ವಾಮಿಯ ರೂಪು ಎನ್ನ ದೇವನ ನಿಲುವು,
ಆ ಕಣ್ಣು- ಆ ಮೂಗು- ಎಲ್ಲವೂ ಅದೆ ಚೆಲುವು,
ಅವರದೇ ಪಡಿಯಚ್ಚು! ಅಯ್ಯಯ್ಯೊ ದುಂಡಾಗಿ
ಇಂಬಾಗಿ ಮಧ್ಯೆ ಸುಳಿಯಿಂ ಗುಳಿಯ ಗುಣ್ಪಾಂತ
ಎಂಥ ಗಲ್ಲದ ಮಾಟ! ಬಲಗಣ್ಣ ಕೊನೆಯಲ್ಲಿ
ಮುದ್ರೆಯಂತಿಹ ಬಿಳಿಯ ಕಿರುಮಚ್ಚೆ! ಮೇಲ್ತುಟಿಯ
ಮಧ್ಯೆ ಸಂಧಿಯ ಮಣಿಯು! ಎಸಳು ಮೂಗಿನ ಮೊನೆಯು
ಒಂದೆರಡೆ? ಸರ್ವಾಂಗವವರನೇ ಸೆಳೆತಂದ
ಕಂದನೋ ಪ್ರಾಣೇಶನೆರಕವೇ ಪ್ರತಿಬಿಂಬ!
ಮಾವನೈದಿದರವರ ಮಗನ ನೋಡಲಿಕೆಂದು.
ಕಂದ ಹೋದನು ತಂದೆಯನು ಕಾಣಲಿಕ್ಕೆಂದು.

ದಾಸಿಯುಂಬಿಕೆ ತನ್ನೊಡತಿಯ ಪತಿ ಬಹರೆಂದು,
ಪರಿಚಾರರೋ ಪ್ರಭುವರನ ದರ್ಶನಕ್ಕೆಂದು,
ಲಗುಬಗೆಯೊಳೋಡಿದರು ನಗರದೆಡೆ; ಅರಮನೆಯ
ದಾಸ-ದಾಸಿಯರಿಗಿಹ ಪುಣ್ಯವೆನಗಿಲ್ಲದೆಯೆ
ಮೂಲೆಗೊಂಡಿಹೆನೆ"ಂದು ಕೊರಗಿ ಹಲುಹಲುಬಿದಳ
ನೆಲೆಯರಿಯದಾ ಕಾಲವೃಕ್ಷದಿಂದುದಿರಿರುವ
ಎಲೆಯನೆಣಿಸಲು ಬಹುದೆ? ನೆನಹುಗಳ ಬೆಂಬಿಡಿಯೆ
ಕೆಚ್ಚಲುಣ್ಣಿಯನಟ್ಟುವಾಕಳಿನ ಗತಿಯಲ್ತೆ?

೨

ನಗರದಲಿ- ಗುಡಿಗುಡಿಯು ಮನೆ ಮಹಲುಗಳ ಮ
ತಳಿರು ತೋರಣವೆದ್ದು ಮಿಳಿರೆ, ಫಲಪುಷ್ಪಗಳ
ಪಿಡಿದು ನಿಲೆ ಉತ್ಸಾಹದೊಳಿರೆ ಮುತ್ತೈದೆಯರು,
ಸ್ವೀಕರಿಸಿ ಗುರುದೇವ ಮುಂದು ಮುಂದೈತಹರು.
ಒಬ್ಬರನ್ನೂ ಬಡದೆ ನಿಬ್ಬರದಿ ನುಡಿಪಂತೆ
"ಆನಂದ, ಅದುಚಿನ್ನ, ಸಂತೋಷ, ಯುಕ್ತವಿದು,
ಆಗಲಾಗಲಿ ತಾಯಿ, ಸರಿಯಮ್ಮ, ಒಳಿತಾಯ್ತು",-
ಎಂಬ ಕರುಣಾಪೂರ್ಣ ಅಮೃತಸೇಚನೆ ಗೈದು
ಮುಂಬರಲು, ಘನಚಿತ್ತಕೇನೆಂದು ತೋರಿತೋ?
ಸನಿಹದಶ್ವತ್ಥದೆಡೆಗೇ ದೇವ ಸಾರಿದರು.

ಕ್ಷಣಕಾಲ ಜಾನದಲಿ ಕುಳಿತು ಕಣ್ಮುಚ್ಚಿದರು.
ಶ್ರೀಮುಖವು ಗಾಢತೆಯ ಆಳವನು ಬಿಂಬಿಸಿರೆ,
ಸುವಿಶಾಲ ಫಾಲದಲಿ ನಸುನಿರಿಗೆ ಕಾಣಿಸಿರೆ,
ದೇವ ಕಂದೆರೆವಾಗ, ಹಾಲುಕ್ಕಿ ಬರುವಂತೆ-
ವೊಗದಲ್ಲಿ ಮಂದಹಾಸದ ಕಡಲು ನೊರೆಯುತಿದೆ.
ಒಣಗಿ ಬರಿದಾದ ಹಣತೆಗೆ ನೇಹವೆರೆವಂತೆ-

ಕನಿಕರದಿ ಕಣ್ಣು ಕರುಣಾರಸವನೊಸರುತಿದೆ,
ದಿಟ್ಟೆ ನೊನೆಗೊಂಡಿತ್ತು ದೂರ ನಿಟ್ಟಿಸುವಂತೆ.
ತನ್ನ ನಚ್ಚಿನ ಶಿಷ್ಯನಾನಂದನನು ಕರೆದು
ಕಳುಹಿದರು ಸಂದೇಶವೆನೆ ದೇವಿಯೇ ಧನ್ಯೆ!

"ಅರಮನೆಯೊಳಲ್ಲಿ ದೇವಿಯರು ಕಣ್ಣೀರ್ದುಂಬಿ
ಕಾಣಲಾರೆನೆ ತಾನು ಎಂದು ಮರುಗುತ್ತಿಹರು;
ಇನಿತೆಲ್ಲವರು ಎಮ್ಮ ಕಂಡು ಸಂತಸವಡಲು
ಆ ಜೀವವಲ್ಲಿದ್ದು ನೊಂದು ಬೇವುದು ಸರಿಯೆ?
ಬಹುಕಾಲ ನೋಡದವರೆಲ್ಲ ನೋಡಲಿ ಎಂದೆ
ಬಂದಿಹವು; ಆನಂದ, ನೋಯಬಾರದು ದೇವಿ!
ನೋಡಬಾರದು- ಎಂಬ ನಿಯಮವೆಮಗೇನಿಲ್ಲ;
ಬರಬಹುದು ಎಂದು ನೀ ದೇವಿಯರ ಸಂತೈಸಿ
ಬಾರೆ"ನೆ- ಹಸಾದವೆನುತೊಡನೆದ್ದು ತಲೆವಾಗಿ
ಆನಂದನಂತು ಧಾವಿಸಿದನರಮನೆಗಾಗಿ.

ಅಲೆಯಾಗಿ ಬೀಸಿತ್ತು ತಂಗಾಳಿ; ಅರಳಿಯೆಲೆ-
ಗುರುದೇವನಿಂಗೆ ನೆರಳಿತ್ತು ವೈಮೆಗೆ ಹಿಗ್ಗಿ
ಮರ್ಮರಿಸೆ; ಜನವೃಂದ ಜಯವೆಂದು ಕೈಜೋಡಿ
ಸಂಭ್ರಮಿಸೆ; ಕಂಚುಕಿಯು ಹೆಗಲನಾನಿಸಿಕೊಂಡು
ನಡೆಯಲಾರದೆ ನಡೆದು ಬರುವರಸುಗಳ ಕಂಡು,
ಆಹ! ರಸನಿಮಿಷ, ನೋಳ್ಪರ ಕಣ್ಣ ಪುಣ್ಯವೇ!!
ಲೋಕಕೇ ಗುರುವಾದವರು ತನ್ನ ಗುರುಜನವ-
ತೀರ್ಥರೂಪರನೈದಿ ತಬ್ಬಿದರು. ಧನ್ಯವೇ
ಧನ್ಯ ಶುದ್ಧೋಧನನ ಜನ್ಮ ಪಾವನವಾಯ್ತು;
ನಮ್ರ ವಿನಯಾದರ್ಶ ಲೋಕಭೂಷಣವಾಯ್ತು!

ಅರಸನಂಗಾಂಗದಲಿ ಪುಣ್ಯವೇ ಒಸರೊಡೆದು
ಹರಿಯುತಿದೆ; ಹೃದಯದಲಿ ಕ್ಷೀರಸಾಗರ ನೊರೆದು
ನೊರೆಯುತಿದೆ; ಪದಶಿಖಾಂತವು ಪುಳಕ ಕೇತನವು

ಮೆರೆಯುತಿದೆ ಬಾಳ ಕೋಟಲೆಯು ಕೊನೆ ವಿಜಯ
ಸರ್ವಧಾರಣ ಲೋಕಕಲ್ಯಾಣಕರ್ತಾರ
ಚಿರಸನಾತನ ಸತ್ಯ ಸೌಂದರ್ಯ ಭರ್ತಾರ-
ವಾದ ಶಕ್ತಿಯನಂತಕಾಲ ನಿತ್ಯಾನಂದ
ಬ್ರಹ್ಮವೇ ತಕ್ಕೈಸಿದಂತೆ, ಜಗದಾಲಂಬ
ದಿವ್ಯತೆಯನೇ ಹೊದ್ದುಕೊಂಡಂತೆ, ಅದ್ವೈತ
ತತ್ವೈಕ್ಯವಾದಂತೆ ತನ್ಮಯನು ಭೂನಾಥ!
ಪ್ರಜ್ಞೆಯಳಿಯಿತು ಬಾಹ್ಯ ಮರೆತುಹೋಯಿತು ದೊರೆಯ;
ಸೃಷ್ಟಿಯರಿಯದ ಗುಹ್ಯಲೋಕ ತೆರೆಯಿತು ಮರೆಯ;
ಸ್ಫೋಟವಾಯಿತು ಸೂಕ್ಷ್ಮ; ಚಿರ ಚಿರಂತನ ಪಕ್ಷ್ಮ
ತೆರೆಯೆ ದಿವ್ಯಜ್ಯೋತಿ ಹರಿಯೆ ಝುರಿಝುರಿಯಾಗಿ,
ಆ ಜಲಪ್ರೋತದಲಿ ಹೊಂಗಳಸ ತೇಲುತಿದೆ.
ಶಾಂತಿರಸದಾಕೂಲ ಸಾಗರತರಂಗದಲಿ
ಮುಕ್ತಾತ್ಮ ನೌಕೆಗಳು ತೇಲಿ ಮುಂಬರುವಂತೆ,
ಮೋಕ್ಷಮಾತೆಯ ತೋಳ ತೊಟ್ಟಿಲಿನ ಕೂಸಂತೆ,
ನಿರ್ವಿಕಲ್ಪದ ಹಾಲುಗಡಲ ಸಾರಸದಂತೆ
ಡೋಲಾಯಮಾಯಿತಾ ದೊರೆಯ ಪಂಚಪ್ರಾಣ.
ತಂದೆಯನು ಕೈಗೊಟ್ಟು ಕರೆತಂದು ಅಶ್ವತ್ಥ-
ಕುಜದಡಿಯೆ ಕುಳ್ಳಿರಿಸೆ; ಅರಮನೆಯ ಹಿರಿದಾಸಿ
ಅಂಬಿಕೆಯೊಡನೆ ಬರುವ ದೇವಕಾಯದ ಅಚ್ಚು,
ಪೂರ್ವಾಶ್ರಮದ ನೆಚ್ಚು ಒಳ್ಳಿಯೆ ವಸಂತದಲಿ
ಚಿಗುರೊಡೆದು ಹೂಬಿಟ್ಟ ನಳನಳಿಸುವೆಳೆ ಮುಗುಳ
ಪ್ರೇಮ ಜೀವನವರ್ಥವಾಗಿ ಹುಟ್ಟಿದ ಹುರುಳು
ರಾಹುಲ ಕುಮಾರನಾಗಲೆ ಗುರುವ ಕಂಡೊಡನೆ
ದೂರದಲೆ ಅಂಬಿಕೆಯು ಕೈಬಿಡಿಸಿಯೋಡೋಡಿ
ಅರಳಿ ಕಟ್ಟೆಯ ಹತ್ತಿ ಬಂದು ಭಗವಂತನನು
ಬಾಚಿ ಕೊರಳನು ಬಳ್ಳಿಯಂದದಲಿ ಬಳಸಿದನು.

ಕರು ತನ್ನ ತಾಯಿ ಹಸುವನು ದೂರದಲಿ ಕಂಡು
ಚಿಗಿ ಚಿಗಿದು ಪುಟನೆಗೆದು ಚಿನ್ನಾಟದಲಿ ಬಂದು
ಬಾಯ್ದೆರೆದು 'ಅಂಬಾ'- ಎನುತ ನೊರೆದು ಕರೆವಂತೆ;
ಗುಟುಕು ತರವೋದ ತಾಯ್ವಕ್ಕಿ ಬರವನು ಕಂಡು
ಗೂಡೊಳೊರಗಿದ ಎಳೆಯ ಮರಿಯೆದ್ದು ಚಿಲಿಪಂತೆ;
ಹತ್ತು ವರುಷದ ಕಂದ ಸರ್ವಾಂಗದಕ್ಕರೆಯು
ಚೆಂಬಾಯೊಳೊಟ್ಟಯಿಸಿ, ಹುಟ್ಟಿದಾರಭ್ಯದಿಂ
ಕರೆಯುದಾ ಬಾಯ ಶೀಟಿಯನಿಂದೆ ಕಳೆವಂತೆ;
"ಅಪ್ಪಯ್ಯ, ಅಪ್ಪಯ್ಯ, ಅಪ್ಪಯ್ಯ, ಅಪ್ಪಯ್ಯ"—
ಎನ್ನುತೆಕ್ಕೆಕ್ಕೆಯಲಿ ಕರೆದು ಕೂಗಾಡಿದನು.
"ಏನು ಕಂದಾ ಏನು? ಆರು ನೀನೇನಾಯ್ತು?''
ಎಂದು ಬೆಸಗೊಂಬಾಗ ಅಂಬಿಕೆಯು ಬಂದಿರಲು
"ಯಾರಿದಾ ಅಂಬಿಕೆಯೆ? ಸೌಖ್ಯವೇ ನಿಮಗೆಲ್ಲ?
ಎಳೆಯನಾರೀತ- ಹೋ ಕಂದನೇ? ಸಂತೋಷ!''
ಎಂದು ತಬ್ಬಿದರು. ಭಗವಂತನಾ ವದನಾರ-
ವಿಂದದೊಂದೆಸಳೊ? ಜೇಂಬನಿಯೊ? ಮೇಣ್ ಮಕರಂದ-
ಕೆಂದು ಗುಂಜಾರವವನುಳಿದು ಪುಷ್ಪಾಶಯದಿ
ತಂಗಿದ್ದ ಭೃಂಗವೋ? ತಾತನಪ್ಪಿದ ಚೆಲುವ
ಕಂದನೋ? ಎನುವಂತೆ; ಬಿಡುಗಡೆಯ ಮುಡಿಲಲ್ಲಿ
ಪವಡಿಸಿದ ಪುಣ್ಯಫಲದಂತೆ ತೋರಿತು ನೋಟ!
ಕಂದ ಕೊರಳಪ್ಪಿರಲು, ಆ ಮಹಾತ್ಮನ ತೇಜ-
ದೊಂದು ಹೊಗರಂತೆ, ನಿತ್ಯಾನಂದ ಲೀಲೆಯಲಿ
ಮಂದಹಾಸದ ವಾರಿಧಿಯು ಶಾಂತ ವಲಿಯಂತೆ,
ವಿಶ್ವಂಭರನ ವಕ್ಷ ಮಧ್ಯೆ ಕೌಸ್ತುಭದಂತೆ
ಕಂಗೊಳಿಸೆ; ಇಹ-ಪರಂಗಳ ನಡುವೆ ನಿಶ್ರೇಣಿ-
ಯಂತೆ, ಶುದ್ಧೋಧನನ- ಬುದ್ಧದೇವರ ಮಧ್ಯೆ
ರಾಹುಲನು ಶೋಭಿಸಲು; ದೇವ ಸಂತೈಸಿದರು.

ಅದುವೆ ಕಟ್ಟೆಯ ಮೇಲಿನಿಂದೆ ನೆರೆದರಿಗೆಲ್ಲ
ಕಿರಿದೊಂದು ಉಪದೇಶ ನೀಡಿದರು. ಜನರೆಲ್ಲ
ಅನಿಮಿಷರು- ತತ್ವಾಬ್ಧಿಯಲಿ ಮಿಂದು ಮಿಂದು ಬಿಡುತಿದ್ದರು.

× × × × × ×

ನಾರಿಯರು ನಲಿವಲ್ಲಿ ಸಗ್ಗ ತೆರೆಯುವುದಂತೆ!
ಹೆಣ್ಮನವು ನವನೀತ ನಿಜವಾದರೇನದನು
ತಣ್ಣನಿರಿಸಲುಬೇಕು, ಬಿಸಿಯು ನಸುವಾದರೂ
ಕರಗದೇ? ಬಳ್ಳಿಯೆಂಬರು ಕೋಮಲೆಯರನ್ನು;
ಹೊಂದಿದಾಧಾರ ತಪ್ಪಿಸೆ ಸುಡುವ ಬಿಸಿಲಲ್ಲಿ
ಬಾಡದೇ? ಹೆಣ್ಣ ಎದೆಯಾಳವನು ಲಾವಣ್ಯ
ರಸಗೀತವೆಂಬರೂ ಒಡೆದ ಸೋರೆಯ ನಾದ
ಬಿರಿಯದೇ? ತಂತಿಯನು ಬಿಗಿದು ಕಟ್ಟಿದರೇನು?
ತಾಳ ತಪ್ಪಿದ ಮೇಲೆ ಮೇಳ ಹೊಂದುವುದೆಂತು?
ಹತ್ತು ವರುಷವೆ ಅಲ್ಲ- ಚಿರವಿಯೋಗದ ಉರಿಗೆ
ಹೊತ್ತಿ ಸೀಕರಿಹೋದ ವಪುವಲ್ಲರಿಯ ದೇವಿ
ಕರ್ಮೋಡದೆಡೆಯ ಕಂದಿರುವ ಕೌಮುದಿಯಂತೆ,
ರವಿಯಸ್ತಮಿಸಲು ಬಾಡಿರುವ ತಾವರೆಯಂತೆ,
ಬಿಸಿಲೊಳರೆಬೇದ ಮಾಮಿಡಿದೆಳೆಯ ಚಿಗುರಂತೆ,
ಬಸವಳಿಯುತಿರ್ಕೆಯಲಿ ಬಿದ್ದ ಲಾವುಗೆಯಂತೆ;
ಸುಪ್ಪತ್ತಿಗೆಯ ಚೆಲ್ಲಿ ಬರಿಯ ಮಂಚದ ಮೇಲೆ
ಉಪ್ಪವಡಿಸಿರಲು, ಆನಂದ- ತನ್ನಕ್ಕಿಯನು
ನೋಡಿ ಸೈರಣೆಯನೀಡಾಡಿದನು ಎನುವಾಗ
ಹೇಳಲಾಗದು ವೆತೆಯ ಕೇಳಲಾಗದು ವಿಧಿಯು!
ಬೆಳಿಚಿ ಬತ್ತಿದ ಕೆನ್ನೆ- ನೀಯು ಗೆರೆಯಾಂತ ಹಣೆ-
ಬೆಂದ ಚೆಂದುಟಿ- ಅರ್ಧ ಮುಚ್ಚಿದಲಸಿದ ಕಣ್ಣು;
ಕಣ್ಣ ತಳದಲಿ, ಕಾಡಿಗೆಂಬ ಕವಡಿಯುಳಿದಂತೆ,
ಕವಪುಗನ್ನಡಿ ಕಿಲುಬುಗೊಂಡು ಕರಿದಾದಂತೆ,

ವಿಧುವನಾವರಿಸಿ ಮುಂಬರುವ ಲಾಂಛನದಂತೆ,
ಬಾಳಿಗೇ ಕವಿದ ಕತ್ತಲೆಯ ಪಡಿನೆಳಲಂತೆ.
ಕರಿಯ ಛಾಯೆಯು;- ಹಿರಿಯ ಕುಂಕುಮದ ಹಣೆಬೊಟ್ಟು-
ಎಣ್ಣೆಗಾಣದ ಕುರುಳು- ವೇಣಿಗೊಳ್ಳದ ಮುಡಿಯು-
ಮುಂಗೈಗೆ ಸಲುವ ಬಳೆ- ಪುಣ್ಯೋದರಕ್ಕಿಳಿದ
ಮಾಂಗಲ್ಯ! ಮಂಗಲೆಯಭಾಗಿನಿಯೊ? ಯೋಗಿನಿಯೊ?

"ಅತ್ತೆ, ನಾನಾನಂದ ಬಂದಿಹೆನು, ಗುರುದೇವ-
ರಿತ್ತ ಸಂದೇಶವನು ತಂದಿಹೆನು, ದೇವಿಯರು
ಅತ್ತ ಬರಬಹುದಂತೆ, ನೋಡಬಾರದು ಎನುವ
ಕಟ್ಟವರಿಗಿಲ್ಲಂತೆ, ಕಳವಳವು ಬೇಡಂತೆ"-
ಎಂದು ಆನಂದನೆನೆ ಕೇಳಿ ಚಮಕಿತಳಾಗಿ,
ಒಂದರೆಕ್ಷಣಕೆ ಉತ್ಸಾಹಗೊಂಡವಳಾಗಿ,
ಮ್ಲಾನತೆಯ ಮೊಗದಲ್ಲಿ ಮಂದಹಾಸವು ಮೂಡಿ
ದಿಗ್ಗನೆದ್ದಳು; ದೇವಿ ಚೀನಾಂಬರದ ಸೇಲೆ
ಹೊದ್ದುಕೊಂಡಳು; ಕೊನೆಗೆ ಉದ್ವೇಗದಿಂದಳಲ
ಮುಕ್ಕುಳಿಸಿದಂತೆ ಬಿಕ್ಕಳಿಸಿದಳು ಅಕಟಕಟ!

ಜಾರಿ ಜಿಗ್ಗನೆ ಬೆಳಗಿ ಮತ್ತೆ ಕಾಣದೆ ಹೋಗಿ
ಮಾಯಕದ ಮುಡಿಲೊಳೊರಗುವ ಉಲ್ಕೆಯಂದದಲಿ
ಮಿಂಚಿದುತ್ಸಾಹ ಒಮ್ಮೆಲೆ ಮರೆಗೆ ಸಂದಿತ್ತು.
ಯಾವ ನಿರ್ಧರವೊ- ಇನ್ನಾವ ಶಂಕೆಯೊ? ಹೊದ್ದ
ಸೇಲೆಯನು ತೆಗೆದಿಟ್ಟು, ಧಾರೆ ಧಾರೆಯೆ ಹರಿವ
ಕಣ್ಣೀರಿನೊಡನೆ ಮೇಲುಬ್ಬುಸದ ನಿಟ್ಟುಸಿರ
ಭರವ ತಾಳದೆ ದೇವಿ ಕುಸಿದಳೆಂದೆನುವಂತೆ
ಪಲ್ಲಂಗದಲ್ಲುರುಳಿ, ಮೊಗಮುಚ್ಚಿ ಬಿಕ್ಕಳಿಸಿ-
"ಕಂದ ಆನಂದ, ನೀ ಮುಂದಾಗು, ತಡೆದುಬಹೆ"
ಎಂದೊರೆದು ಕಳುಹಿ ತನ್ನೊಳಗೊಳಗೆ ಹಲುಬಿದಳು.

“ಎನ್ನ ಮನದುಮ್ಮಳದ ನೆಲೆಯರಿತ ನುಮನಾಥ!
ಕರುಣಾಳು, ದೇವ ಕೈಮುಗಿವೆನಿಲ್ಲಿಂದಲೇ;
ನೊಂದಿಹೆನು ನಿಜ, ತಡೆಯಲಾರೆನೆಂಬುದು ಸಹಜ!
ಎನ್ನಂತೆ ಈ ವಿಯೋಗದ ಕಾಲ ಮನದೊಳೇ
ನೊಂದಿರೋ ಬೆಂದಿರೋ ಸಮತೆಗೊಂಡಿರೊ ತಿಳಿಯೆ!
ಆದರೂ ಒಂದು ನಿಜ, ನಗರಕ್ಕೈತಂದಿಹಿರಿ;
ಸರ್ವರೂ ಕಂಡು ಸುಖಿಸಲಿಯೆಂದೆ ಬಂದಿಹಿರಿ;
ಸ್ವಾಮಿಯೇ ಸೆಟೆದು ನಿಂದವಳಲ್ಲ– ಮನಮನದ
ಒಳವರಿತಿಹಿರಿ, ‘ದುರಾಗ್ರಹದ ನೆಲೆಯುವಳಲ್ಲ’
ಎಂಬುದನು ಕಾಣಿರೇ? ಬರಲಾರೆ ದೊರೆಯೇ!
ತಮಗೆ ಕಾಣುವ ತವಕವಿಲ್ಲಲೇ? ಇನಿತೊಂದು
ಧೃತಿ ಮತಿಯ ದಾರ್ಢ್ಯತೆಯ ಕಂಠೀರವನ ಕೈಯ
ಹಿಡಿದಾಕೆ ಬೆಳ್ಳೆರಲೆಯಂತೆ ಸ್ವೈರಣೆಗೆಟ್ಟು
ಬರಲೆ? ಬಹೆನೇ? ಮಾನವೇ ಪ್ರಭುವೆ, ಸತಿಯರಿಗೆ
ಬರಬಹುದು ಎಂದಿಹಿರಿ ನಿಜ; ಸಾವಿರದ ಮಧ್ಯೆ
ಎಲ್ಲಿಯೋ ಒಂದು ಮೂಲೆಯ ಮೂಲೆಯುಲಿ ನಿಂದು
ಸಾಗರದಪಾರತೆಯುಲೊಂದು ಜಲಕಣದಂತೆ—
ಕಾಣಲೇತಕೆ? ಕಣ್ಣ ಕೀಳಲೇತಕೆ ಚೆನ್ನ?
‘ಎಲ್ಲರಂತಲ್ಲೆನ್ನ ಪೂರ್ವಾಶ್ರಮದ ಸತಿಯು’
ಎಂಬ ಕನಿಕರವಿರಲು ತಾವಾಗಿ ಬಾರಿರೇ?
ಕಾದಿರುವೆನಿಲ್ಲಿ ನಿಮಗಾಗಿ ಹರಣವ ಹೊತ್ತು
ಕೇಳಿ ಪರಿಹರಿಸಬೇಕಾದುದೆನಿತೋ ಉಂಟು.
ಲೋಕಕೇ ಗುರುವಾಗಿ ತಡವಿ ತಕ್ಕೈಪವರು
ಎಡವಿ ಪೋಪಿರೆ? ಎನ್ನ ಭಾಗ್ಯವಿನಿತೇ ಎನುವೆ!’’
ಎನುವಾಗ ಮರಳಿ ಕಣ್ದುಂಬ ಹರಿಯಿತು, ಹೊನ್ನ
ಪಂಜರದ ಶಾರಿಕೆಯು ಶಾಂತಿ ನುಡಿಯಿತು, ಮುಂದೆ
ತೊಳಗುತಿಹ ಚಿತ್ರ ಫಲಕದ ಬಿಂಬಕಳೆವೆತ್ತು

ಅಭಯವಿತ್ತಂತೆ ಕಂಡಿತು; ದೇವಿ-ಒಡನೆದ್ದು
"ಪ್ರಾಣದೇವಾ ಪಾಪಿಯನ್ನುದ್ಧರಿಸು" ಎಂದು
ದೀನಾರ್ತಳಾಗಿ ಮೊರೆಯಿಟ್ಟು ಹಂಬಲಿಸಿದಳು.

× × × × ×

ತನ್ನ ತಾನೇ ತಿಳಿದು ಮುನ್ನಡಸಿ ತರಬೇಕು,
ಹಲವಾಸೆವಿಷಗಳು ಬುದ್ಧಿಯನೊದ್ದು ಕೆಡಹುತಿರೆ
ಎದ್ದೆದ್ದು ನಡೆವುದೇ ನಿಜದಾರಿ, ಸಹನೆಯೇ
ಬುದ್ಧಿವಾರುಹಕೆ ಹಲ್ಲಣೆಯೆನೆ ಜೀವನದ
ಕೋಟಲೆಯ ಕಂದರದಿ ಮುಗ್ಗರಿಸೆ, ಸೈರಣೆಯ
ಸಾವಧಾನವ ಬಿಡದೆ ಸಮತೆಯನ್ನಾಧರಿಸಿ
ತಾಳಿಕೊಳ್ಳಲುಬೇಕು; ಅನುದಿನದ ಜಂಜಡದ
ಚಾಂಚಲ್ಯದಿಂದರಿವು ತಿಳಿನೀರು ಕಲಕಿದರು,
ಮರಳಿ ತಿಳಿಯಪ್ಪನಕ ಕಾದಿರುತ ನಿಲಬೇಕು;
ಶಾಂತಚಿತ್ತಕ್ಕಿನಿತು ಸಾಧನೆಯ ಬಲಬೇಕು.
ಆ ಸಾಧನೆಯು ಫಲಿಸಿತೋ——ಬೇರೆ ತಪಬೇಡ.
ತನ್ನ ಕಿರಿಮೆಯ ಕಂಡು ಹೇಸಿಕುಸಿಯಲು ಬೇಡ;
ಹಿರಿಮೆಯಲಿ ಹಿರಿಹಿಗ್ಗಿ ಪೊಟ್ಟಳಿಸುವುದು ಬೇಡ;
ಸಾಧ್ಯವೇ ತನಗೆಂಬ ಸಂದೇಹ, ಸಾಹಸದ
ಅಭಿಮಾನದಲಿ ಡಂಭ, ಬೇಡ. ಪರಶಕ್ತಿಯನು
ಕಲ್ಯಾಣ ಕರ್ತೃವೆಂದೊರೆದ ಹಿರಿಯರು ಹಿರಿಯ
ಸತ್ಯವನೆ ತೆರೆದಿಟ್ಟು – ಕರ್ತವ್ಯಗಳ ಹೊತ್ತು
ನಗುನಗುತ ನಡೆ ಮುಂದೆ – ಎಂದರೇತಕೆ ಹಿಂದೆ?
ಆ ಶಕ್ತಿ ಮೈಗೊಟ್ಟು ಶಿವದಲ್ಲಿ ಸಲ್ಲುವುದು;
ಆಂತರ್ಯದಿಂದೊಡೆದು ಧೃತಿಯಾಗಿ ನಿಲ್ಲುವುದು.
ಸಾಧನೆಯ ಸೌಧವನು ಸಂಯಮದ ಅಡಿಗಲ್ಲ
ಮೇಲೆ ಕಟ್ಟಲು, ಕುಸಿವುದೆಂಬ ಕುತ್ತುಸಿರಿಲ್ಲ!
ಗಗನ ಚುಂಬಿಯು ಗೈವ ಗರ್ವಕೂ ಬಲವಿಲ್ಲ.

ಸಾಧನೆಗೆ ನೀ ಬಾಧ್ಯ ಫಲದಾಸೆಯೇ ತ್ಯಾಜ್ಯ!
ಸಾಗರ ವಿಶಾಲತೆಯನೇ ಕಂಡು ಬೆಚ್ಚಿದರೆ
ಉತ್ತರಿಸಲಾರೆ ತತ್ತರಿಸದಿರಲಾರೆ; ತವ
ನೌಕೆಯನೊ ದೋಣಿಯನೊ – ನಿನ್ನಳವಿಗೊದ
ಹತ್ತಿ ಮುಂಬರಿಯೆ ಬಲು ದೂರದೂರಕೆ ನಡೆವೆ.
ಆದರೊಂದೆಚ್ಚರವು! ತಡಿಯಿಂದ ನೀ ಬಂದ
ಹಾದಿ ದೂರಕೆ ಕಣ್ಣು ಮಾರದಿರು ಮದದಿಂದ.
ಮುಂದೆ ನಡೆ, ಬಂದ ಪಯಣದ ಪರಿವೆಯಿಲ್ಲದೆಯೆ
ಹಿಂದಿಕ್ಕು ಯೋಜನಂಗಳ. ಹಿಂದಣಿನ ತನ್ನ
ಕೀಳ್ತನಕೆ ಹೇಸಿದವನೇ ಹಿರಿಯನೆನಿಸುವನು.
ಹಿಗ್ಗಿದವನೇ ವ್ಯಾಪ್ತವಾದಪಾರತೆ ಕಂಡು—
ಏನು ತನ್ನಿರವೆಲ್ಲಿ ಈ ವಿಶ್ವದೊಡಲಲ್ಲಿ?
ಎಂದು ಸಣ್ಣಾಗುವನು ತಿಳಿದು ತಣ್ಣಾಗುವನು.
ತಾನೆಂಬುದೇ ಇಲ್ಲವಾ ಬುದ್ಧಿಯೊದಗಿ ಬರೆ,
ತಾನೆ ತನ್ನವನಲ್ಲ, ತನ್ನದೆನ್ನುವ ಸೊಲ್ಲ-
ನೀಡುವುದಕು ತೆರವಿಲ್ಲ ಸಾಮುಸ್ತ್ಯದೊಡಲಲ್ಲಿ.
ನಿಷ್ಕಾಮವದು, ಅನಾಸಕ್ತಿ ಕರ್ತವ್ಯಕೃತಿ.
ಸರುವ ಚೇತನವಾದ ಚಿರಸನಾತನವಾದ
ವರ ವಿನೂತನವಾದ ವಿಶ್ವದೀ ವೈಶಾಲ್ಯ
ಶಾಶ್ವತದ ಹಿರಿಬಾಳಿನೆಳೆಯ ಕಣಕಣವಾಗಿ,
ಚಿರದೊಂದು ಚಣದಲ್ಲಿ ಕೋಟಿಕೋಟಿಯ ಛಿದ್ರ
ದಣುವಾಗಿ 'ತಾನಿ'ಂದು ಎಲ್ಲಿಯೋ ಚೆಲ್ಲಿಹೆನು;
ಏನಪ್ಪೆನೋ ಮುಂದೆ ಎನ್ನಳವಿನೊಳಗಿಲ್ಲ.
ಅಳವಿಗೊದಗಿದ ನಿಮಿಷವನ್ನು ಸಾರ್ಥಕಗೊಳಿಸು.
ನಿಂದವರ ಬಂದವರ ಕುಳ್ಳಿರಿಸು– ಸಂತೈಸು.
ನೊಂದವರ ಕಣ್ಣೀರನೊರಸು–ಮುದವುಣಿಸು.
ಹಿತವ ಸಾಧಿಸು ಸತತ, ಅದುವೆ ಸದ್ಗತಿಯ ಪಥ!

ಎಂಬ ಬೋಧೆಯ ಮುಗಿಸಿ ಗುರುದೇವನಿರ್ಚಣವ
ಧ್ಯಾನದಲಿ ಕಳೆಯೆ ಆನಂದನಾಗಮಿಸಿದನು.
ಕಣ್ಬಿಟ್ಟು ದೇವ ಶಿಷ್ಯನ ಕಂಡು ನಸುನಕ್ಕು
"ಆನಂದ! ದೇವಿಯರು ಏನಂತೆ? ನಾವಾಗಿ
ಬಿಜಗೈಯಲೆಂದು ಬಯಸಿಹರಲ್ತೆ? ಸಂತೋಷ!
ನೊಂದಿಹರು; ಸಂತೈಪುದೆಮ್ಮ ಸಂತಸ-ಧರ್ಮ;
ಇಂದು ಸಂಜೆಗೆ ದೇವಿಯರ ಸೆಜ್ಜೆಯೊಳೆ ಭಿಕ್ಷೆ"—
ಎನಲು ಜನವಾರಿಧಿಯ ತೆರೆ ಮುಸಗಿ ಮೊರೆದಿತ್ತು.
"ಜಯ ಲೋಕ ಉದ್ಧಾರ ಕರ್ತ ಕರುಣಾಮೂರ್ತಿ
ಪತಿತಪಾವನ ಜಗನ್ಮಿತ್ರ ಪರಿವೃತ ಕೀರ್ತಿ."

೩

ಕೃಷ್ಣಾಜಿನದ ಮಂಚದಲ್ಲಿ ದೇವಿಯ ಸೆಜ್ಜೆ-
ಯಲ್ಲಿ ನಸುನಗುತದೋ ಭಗವಂತ ಕುಳಿತಿಹರು.
ಪೂಜೋಪಕರಣಗಳ ಹರಿವಾಣ ಪಾದದೆಡೆ.
ದೇವಿ ಮೊಣಕಾಲೂರಿ ಮಂಡಿಸಿಹಳಂಜಲಿಯ
ಜೋಡಿ ತನ್ನನೆ ಮರೆತು. ತಾಯ ಬೆಂಗಡೆಯಲ್ಲಿ
ರಾಹುಲನು ನಿಂದಿಹನು. ದೇವನೊತ್ತಿಗೆ ಕಿರಿದು
ಸನಿಹದಲಿ ವೃದ್ಧಪಿತ ಕುಳಿತಿಹನು. ಆನಂದ,
ಹುಟ್ಟಿನಲಿ ವೇಶ್ಯೆ ತಾನೀಗ ದೇವನ ಶಿಷ್ಯೆ-
ಯಾದ ಅಂಬಾಪಾಲಿ, ದಾಸಿಯುಂಬಿಕೆಯರೂ
ನಿಂದಿಹರು ನೀರವದ ಬಾವುಟಗಳೆನುವಂತೆ.

ಅರಮನೆಯನಂದು ಹುಣ್ಣಿಮೆ ದತ್ತುಗೊಂಡಿತ್ತು.
ನೀಲಾಗಸದ ಹೋಲಿಕೆಯ ಕೊಳಲು ಸೆಜ್ಜಾರ-
ನಿಂದವರ ಕುಳಿತವರ ತಾರಗೆಯ ತಳಿಯಲ್ಲಿ
ತುಂಬಿ ತೊಳಗುವ ತಿಂಗಳಂತೆಸೆವ ಗುರುದೇವ!
ಶ್ರಾವಣೋದಯದ ಪುಷ್ಕರಣಿಯೆನೆ ಸೆಜ್ಜಾರ-

ತಾವರೆಯು ತಂಡದಲಿ ದಳದಳಂಗಳನರಳಿ
ಕಂಗೊಳುವ ರಾಯದಾವರೆಯಂತೆ ಗುರುದೇವ!
ಸುತ್ತು ಸೌಧಂಗಳಿಗೆ ಪದಕವೆನೆ ಸೆಜ್ಜಾರ-
ಮುತ್ತು ರತುನಗಳ ಕೇವಣಿತ ಮಂಡಲದಲ್ಲಿ
ಮಧ್ಯೆ ಹೊಂಗದಿರುಗಳ ಮಾಣಿಕ್ಯ ಗುರುದೇವ!

ಕಂದ ರಾಹುಲನಂತೆ ಮುದ್ದಾದ ಮೊಗದೊಲುವೆ
ತಂದೆ ಶುದ್ಧೋಧನನ ಗಾಂಭೀರ್ಯದಾ ಬಲುಮೆ,
ಸತಿ ಯಶೋಧರೆಯಂತೆ ಕಣ್ಣ ಕನಿಕರ ನಲುಮೆ,
ಕ್ಷಿತಿಯನೆಲ್ಲವ ಪೊರೆವ ಕರ್ತೃತ್ವದಾ ಮಹಿಮೆ-
ಗಳ ಕೂಡಿ ಪಡಿಮೂಡಿಸಿದ್ದಿತಾ ಮುಖಮುದ್ರೆ.
ಅಂದಿನಿಂದಿನ ರೂಪವೊಂದಲ್ಲ; ಸೌಭಾಗ್ಯ
ರಾಜಭೋಗವೆ ದತ್ತು ಕೊಟ್ಟ ರೂಪಂದಿನದು.
ದಮ ನಿಯಮದಗ್ನಿಯಲಿ ಪುಟವಿಟ್ಟುದಿಂದಿನದು-
ಪುತ್ಥಳಿಯು. ಚಾಗವನೆ ಹೊತ್ತಂತಿರುವ ಜಡೆಯು
ಸಂಜೆವೆಳಗನೆ ಸೆಳೆದು ಉಟ್ಟುದೆನೆ ಕಾವಿಯೂ.

ಬುದ್ಧನುಡಿಸಲು ಬಾಯ ತೆರೆವಾಗ ಸುಲಿಪಲ್ಲ
ಶುದ್ಧ ಧವಳದ್ಯುತಿಯ ಬಿತ್ತರ ಯಶೋಧರೆಯ
ಚಿತ್ತವನು ಬೆಳಗಿ ಬಗೆಗತ್ತಲನು ಕಳೆದಿತ್ತು.
"ನೋಡಲಾಗದ ನೋವಿನಿಂದ ನೊಂದಿಹರೆಂದು
ದೇವಿಯರ ಮನದುಮ್ಮಳವನರಿತು ಬಂದಿಹೆವು.
ನೂರು ಯೋಜನ ದೂರ ನಡೆದು ಬಂದಿಹೆವೆಮಗೆ
ಸೆಜ್ಜಾರವೊಂದು ಹೆಚ್ಚೆನಿಸುವುದೆ? ಧರ್ಮಾತ್ಮೆ
ಜರ್ಜರಿತರಿರೆ ಗಾಣದೆಡೆಯಲ್ಲಿ ಕಬ್ಬಂತೆ,
ಹೆಜ್ಜೆ ಮುಂದಿಡಲಾಪೆವೇ? ತೊರೆದು ಪೋಪೆವೇ?
ಸಜ್ಜನೆಯ ಪೂರ್ವಾಶ್ರಮದ ಸತಿಯು ಮರೆವೆವೇ?

ಸಂಸಾರದಲಿ ಘಾಸಿವಟ್ಟು ಬವಣೆಗೆ ರೋಸಿ
ಸೋಲ ಬೇವಿಗೆ ಹೇಸಿ ಕಾಡಿಗೋಡಿದೆನಿಲ್ಲ.
ಸುಖವೆನ್ನ ಸುತ್ತುವರಿದಿತ್ತು. ದಿನದಿನ ನೋವ
ದುರಿತ ಕೂಪದಿ ಬಿದ್ದು ಸಾವ ಮರ್ತ್ಯದ ಜೀವ
ಕೋಟಿಗಳ ಉದ್ಧಾರಕೇನು ಧರ್ಮದ ಸೂಕ್ಷ್ಮ?
ಯಾವ ಕರ್ಮದ ಗ್ರೈಮೆ? ಎಂಥ ಮರ್ಮದ ಮೂಲ?
ಅರಿಯಲೆಂದಿವನೆಲ್ಲ ಕಾಡಿಗೈದಿದೆನಂದು.
ಪತಿ ವರ್ಜಿಸಿದ ಪಾಪಿಯೆಂಬ ಕೊರಗನು ಬಿಟ್ಟು
ವ್ಯಥೆಯ ಮೂಲವ ಕಿತ್ತು ಸೈರಣೆಯ ಕೊಳಬೇಕು."
ಎನೆ, ದೇವಿ ಕೇಳುತ್ತ ಬಿನ್ನಯಿಪಳಿಂತೆಂದು.

"ಅಪಚಾರವೆಣಿಸದಿರೆ ಅಡಿಗಳಲಿ ಎನ್ನೊಂದು
ಬಿನ್ನಹವು; ತಾವೆನ್ನ ಬಹುವಚನದಲಿ ಕರೆವು-
ದನ್ನೊಲ್ಲೆ"ನೆನೆ ದೇವ– "ಒಂದಲ್ಲ ಬಹಳವಿದೆ;
ಸಂದೇಹಗಳನೆಲ್ಲ ಒಮ್ಮೆಲೇ ಮುಂದಿರಿಸೆ,
ಸಮಚಿತ್ತದಿಂದಾಲಿಸುವೆ"ನೆನೆ ಯಶೋಧರೆಯು
"ಪ್ರಭುವೆ, ತಮ್ಮನು ಕಾಣುವನಕ 'ಪತಿ'ಯೆಂದೆಂಬ
ಬಗೆಯಿದ್ದರೂ ಕಂಡ ಬಳಿಕ ಗುರುವೇ– ಎಂಬ
ನೆಲೆಗೆ ಮುಟ್ಟಿದೆ ಮನವು; ಯಾವ ಸೆಳೆತವೊ ಎನ್ನ
ಐಹಿಕದ ಬೆಸುಗೆಯನು ಬಿಡಿಸುತಿದೆಯಾದರೂ
ಹಿಂದೆ ನಾ ಕೊಳ್ಳುದಿದ ಸಂದೇಹವಾಲೆಯಿದೆ.

ಮನೆಗೆ ಬೆಂಕಿಯು ಕೊಟ್ಟು ಊರ ಬೆಳಗಲು ಬಹುದೆ?
ವೈರಾಗ್ಯ ಚಾಗಗಳೆ ಮಿಗಿಲಾದ ಧರ್ಮದಲಿ
ಜಗದ ಸಂಸಾರಕೆಂದೇನಾವ ಸೂತ್ರವಿದೆ?
ಈಶನಸ್ತಿತ್ವವೀಪ್ಸಿತವಲ್ಲದಿರೆ ಜನದ
ಕಲ್ಯಾಣ ಗುಣ ವರ್ಧನೆಗೆ ಯಾವ ದಾರಿಯಿದೆ?
ಲೆಕ್ಕವಿಲ್ಲದ ಜನರು ಶಿಷ್ಯರಾಗಿಹರಂತೆ

ಸಾಹಿರಂಗಳ ಸಂಖ್ಯೆಯಲ್ಲಿ, ಅಂತಿರಲೆಲ್ಲ
ಸಂಸಾರ ನಂದನವು ಸುಟ್ಟು ಸುಡುಗಾಡಾಗಿ
ಅನಿತೆಲ್ಲ ಸಾಧ್ವಿಯರು ಕಣ್ಣೀರ ಕೂಳುಂಡು
ದಿನದಿನವು ಸಾಯರೇ? ನಡತೆ ನಿಲ್ಲುವುದೆಂತು?
ಧರ್ಮವಿದು ವಾರ್ಧಿಕ್ಯಧರ್ಮವೇ? ವಾನೇಯ
ಧರ್ಮವೇ? ಅಲ್ಲದಿರೆ-ಅದರಿನೊರ್ಮಡಿ ಹೆಚ್ಚೆ?
ಬ್ರಹ್ಮಚರ್ಯೆ ಗೃಹಸ್ಥ ವನವಾಸ ಸನ್ಯಾಸ-
ಗಳನು ಪರಿವಿಡಿಯಾಗಿ ವೇದರ್ಷಿಗಳು ತಿರೆಗೆ
ಬೋಧಿಸುತ ಧರ್ಮಪಥ ಹಾದಿಯೆಡೆ ಚೋದಿಸಿದ
ಸೌಂದರ್ಯಸಾರ ಸಂಸಾರ ಸದ್ಮವ ಕೆಡವಿ,
ಆ ತಾಣದಲಿ ಕಿರಿಯ ಗೋರಿಕಟ್ಟಿದ ಹಾಗೆ
ಆಗದೇ? ತಿರೆಯ ಬಾಳಿಗಗಸ್ತ್ಯನಾಗದೇ?
ಈ ವಿರಾಗದ ಹುಚ್ಚು ಹಸರಿ ಗಂಡುಗಳೆಲ್ಲ
ಮನೆಗೆ ಬೆಂದಿರುಹಿದರೆ ಹೆಣ್ಣಿಗಾಸರೆಯೆಲ್ಲಿ?
ಪುರುಷಾರ್ಥ ಸಂಚಯದಿ ಸಮಭಾಗಿಯನ್ನಾಗಿ
ವರಿಸಿದ್ದ ಸತಿ-ಪತಿಯ ಪುಣ್ಯಸಂಬಂಧದಲಿ
ಎಣೆ ಕಡಿದು ಗಂಡೊಂದು ತನಗೆ ಜೊತೆ ಸಾಕೆಂ
ತೊರೆಯೆ ಸತ್ಕರ್ಮವೇ? ಧರೆಯೊಳಿದು ಧರ್ಮ
ಸೃಷ್ಟಿ ನಿಯಮೋಲ್ಲಂಘನಕ್ಕೆ ವ್ಯರ್ಥಶ್ರಮವೆ?
ಸರ್ವಜೀವರ ಮುಕ್ತಿ ಹಿತವ ಬಯಸುವ ಧರ್ಮ
ಬಂಧುಗಳ ಹಿಂಸೆಯೊಳೆ ಬೇರುಗೊಂಡಿಹುದೇಕೆ?
ಧರ್ಮಸೂಕ್ಷ್ಮವ ತಿಳಿಸಬೇಕು ತಪ್ಪಾಗದಿರೆ,
ಹೆಣ್ಣೆಂಬುದೇ ಕ್ಷುದ್ರವಲ್ಲದಿರಲಿಂದೆನ್ನ
ತಿಳಿವುಗಣ್ಣನು ತೆರೆಸಿ ಬೆಳಕಿತ್ತು ಮುನ್ನಡೆಸಿ."
ಕೇಳಿ ಭಗವಂತ ಪ್ರಶಾಂತ ಕೋಮಲವಾಣಿ-
ಯಿಂದೊರೆದನಿಂತು, "ದೇವಿಯರೆ ನಿಮ್ಮಿಂದಲೇ
ಇಂದೆನ್ನನೀ ಲೋಕಪಡೆದಿಹುದು ತಿಳಿಯಲ್ಕೆ.

ಹೆಣ್ಣೆಂಬುದಲ್ಲವೇ? ಲೋಕಮಾತೆಯು. ನಿಮ್ಮ
ಪ್ರೇಮ ನಂದಾದೀಪವೆನ್ನ ಹೃನ್ಮಂದಿರದಿ
ಬೆಳಗಿದಿರಿ ಸತಿಯಾಗಿ. ಆ ಬೆಳಕಿನೆಸಳನ್ನೆ
ಜಗಕೆ ಸಾನೀಯುವೆನು. ತಾಯಂತೆ ತಲೆಬೆನ್ನ
ಕಾಯೆ, ಕರುಣಾನಾದ ಹೊರಟ ಕೊಳಲೆನ್ನ ಮನ.
ಹೆಣ್ಣು ಕೀಳಲ್ಲ ಹಿರಿದೆಮ್ಮ ಈ ಧರ್ಮದಲಿ;
ಪ್ರೀತೆ ಪೂಜ್ಯೆ ಪವಿತ್ರೆ ಮಾತೆ ಶಾಂತಿಸುದಾತೆ.
ತನ್ನದಿದು ಪರರದಿದು ಎಂಬ ಮಿತಿಯಲಿ ನೋಡೆ
ಅಣು ಹಿಮಾಲಯವಾಗಿ ಅಳಲೆದ್ದು ಬಳೆಯುವುದು.
ಶಸ್ತ್ರಶಾಲೆಯೆ ಹೊತ್ತಿ ಧಗಧಗಿಸೆ ಜನಕರ್ಷಿ
ಸ್ವಸ್ಥಚಿತ್ತದಿ ಯಾಗ ಮಂಟಪದಿ ಮಂಡಿಸಿರೆ,
ಮುನಿಯೊಬ್ಬ ತನ್ನುತ್ತರೀಯ ಸುಟ್ಟಿತು ಎಂದು
ಗೋಳ್ಗರೆದನಂತೆ– ನೀವಿದನು ಅರಿಯದುದಲ್ಲ.
ಭೋಗದಲಿ ನಿಸ್ಪೃಹತೆ ವೈರಾಗ್ಯ ವೊದಲಿನದು;
ತ್ಯಾಗದಲಿ ರಾಗ–ಭೋಗದ ಬೆಸುಗೆ ಮತ್ತೊಂದು.
ಊರಬೆಳಗುವೆನೆಂಬ ಹೆಗ್ಗುರಿಯು ಹಿಡಿದಿರಲು
'ತನತೆ'ಂಬ ಮಮಕಾರವನೆ ವೊದಲು ಸುಡಬೇಕು.
ಆ ತ್ಯಾಗ ಸಿದ್ಧಿಯೆನೆ ಮನೆಯ ಸುಟ್ಟಂತಲ್ಲ,
ತನ್ನ ಬೆಳಕನು ಕೊಟ್ಟು ಊರ ಬೆಳಗಿಸಿದಂತೆ;
ವೈರಾಗ್ಯವೆನೆ ನಿಸರ್ಗದ ನಿಯಮ ಭಂಜನೆಯು
ಜಗದ ಸಂಸಾರಕ್ಕೆ ಕೊನೆಯು– ಎನುವುದು ಸತ್ಯ.
ವೇದ ಧರ್ಮವನೆ ಚತುರಾಶ್ರಮದ ನಿಯಮವನೆ
ಬೋಧಿಸುವ ನವಧರ್ಮದಂತೆ ತೋರುವುದು ನಿಜ.
ಆದರೂ ನಿಜದರಿವು ಬೇರೆಯಿದೆ; ವೇದವನು
ಧಿಕ್ಕರಿಸಿ ನಡೆವ ಪಥವಲ್ಲ ಬೋಧೆಯಿದಲ್ಲ.
ಅದನಲ್ಲಿಗೇ ಬಿಡದೆ ಮುನ್ನಡೆಸಿ ತರುವಾಗ
ಒದಗಿ ಬಹ ವಿಘ್ನಗಳ ಗೆಲ್ಲಲಿದು ನವಮಾರ್ಗ.

ವೈದಿಕ ಪರಂಪರೆಯ ಗಾರ್ಹಸ್ಥ್ಯದಲ್ಲೆನಿತೊ
ವೈರಾಗ್ಯಗೊಂಡು ಜನ ವನಸೇರಿ ಯೋಗದಲಿ
ಆತ್ಮಕಲ್ಯಾಣವನು ಸಾಧಿಸುತ್ತಿರೆ, ಅವರ
ಒಲವು ದಾರವನೆಳೆದು ಭಿಕ್ಷುವೃಂದವ ಗೈದು
ಲೋಕಕಲ್ಯಾಣ ವಿಸ್ತಾರದಲಿ ತನ್ನಾತ್ಮ
ಮೋಕ್ಷವನು ಕಾಣುವಂದದಿ ಗೈವುದೆಮ್ಮ ಗುರಿ
ಸಾಮಾನ್ಯ ಜನಕೋಟಿಗೆಲ್ಲ ಈ ವಿಧವಿಲ್ಲ.
ದುಡಿಮರಿಲ್ಲದೆ ಧರ್ಮದಾಚಾರ ಕೆಟ್ಟಿರಲು
ಅಲುಗುತಿಹ ಆರ್ಯಸಂಸ್ಕೃತಿಯ ಸೌಧವನಿಂತು
ನಿಲಿಸುವುದು ಭಿಕ್ಷುಗಳ ನಿಡುಗಂಬವನು ಕೊ

ಈಶನಸ್ತಿತ್ವವದು ತತ್ವಜೀವಿಯ ಸೊತ್ತು
ಇಂತೆಂದು ಅಂತೆಂದು ಉಂಟೆಂದು ಇಲ್ಲೆಂದು
ತರ್ಕದಲಿ ಚೈತನ್ಯಲಯವಾಗಿ, ದೂಷಣೆಯ
ಪಂಕದಲಿ ಮುಳುಮುಳುಗಿ ಅಜ್ಞರನು ತಬ್ಬುವರು
ಬುದ್ಧಿ ಜೀವಿಗಳೆಲ್ಲ ಕೊಳೆಯನ್ನೆ ಹಬ್ಬುವರು;
ಅಸ್ತಿ ನಾಸ್ತಿಯ ವಾದ ಇಂದು ನಿನ್ನೆಯದಲ್ಲ-
ಯಮಳಾಗಿ ಹುಟ್ಟಿಹುದು ಯಮಳಾಗಿ ಬಳೆದಿಹುದು;
ಎಮ್ಮದಿದು ನಾಸ್ತಿಕ್ಯವೂ ಅಲ್ಲ, ವೆಗ್ಗಳದ
ಭ್ರಮೆಯ ಅತಿಮಡಿಯ ಆಸ್ತಿಕ್ಯವೂ ಅಲ್ಲವಿದು.
ಪ್ರತ್ಯಕ್ಷ ಪಥವು; ಮಧ್ಯಮವೆಲ್ಲರಿಗು ಹಿತವು.
ಇರುವ ಬೊಗಸೆಯ ಗುಟುಕು ನೀರ ಚೆಲ್ಲಾಡು
ಬರುವ ಬಾಂದೊರೆವನಿಗೆ ಬಾಯನಾಕಳಿಸಿದರೆ
ಬುದ್ಧಿಯೇ? ಬುದ್ಧಿ ವಿಪರೀತವೆಂದರೆ ಚೆನ್ನ.
ತಿದ್ದುವುದು ನಡತೆಯನು ಶುದ್ಧಮಾನಸರಾಗಿ
ಬದುಕು ಮುನ್ನಡೆಸಿ ಮುದವಾನುವುದು, ಪರ
ಸಾಧಿಪುದು, ತನ್ನ ಸುಖದಾಮಿಷದ ತವಕದಲಿ
ಅನ್ಯಪೀಡನೆಯ ತೊರೆವುದು, ಶಮೆಯನೆರೆಯು

ನೇರ ದಾರಿಯು ನೇಮ ನಿಷ್ಠೆಗಳು, ನಿಸ್ಪೃಹತೆ,
ಕಾರ್ಯಗೌರವ ಬುದ್ಧಿ, ಅಂತಃಕರಣ ಶುದ್ಧಿ-
ಗಳು ಎಮ್ಮ ಧರ್ಮದಲಿ ಗಣನೀಯ, ಮನನೀಯ.
ಆದರೊಂದಿದೆ ತರ್ಕಜೀವಿಗಳಿಗುತ್ತರವು-
ಹಿಂಸೆಯೇ ಇರದಂತೆ ಬಾಳಲಾರೆವು, ಉಸಿರಿ-
ನೊಂದೊಂದು ಎಳೆಯುಲ್ಲ ಲಕ್ಷಜೀವದ ಹನನ-
ವಿಹುದೆಂದು ತಿಳಿದಿಹೆವು, ಅನಿವಾರ್ಯ ಕಾರ್ಯವದು.
"ಒಂದು ಜೀವದ ನೋವು ಕೋಟಿ ಜೀವದ ನಲಿವು''
ಎಂಬ ಸೂತ್ರದ ಮಾನದಿಂದ 'ಪರಹಿಂಸೆ'ಯನು
ಹೊಂದಿಸುವುದಳೆಯುವುದು ಸೂಕ್ಷ್ಮದಲಿ ತಿಳಿಯುವುದು.
ನಿರ್ವಿಷದ ಸಸಿಯ ಬೇರನು ಕೀಳುವನು ವೈದ್ಯ
ಉರ್ವರೆಯ ಸುಖಕಾಗಿ- ಈ ಮಾನದಂಡದಲಿ
ಸರ್ವ ಸಂದೇಹವನ್ನಳೆಯುವುದು ಕಳೆಯುವುದು"
ಧ್ಯಾನಸ್ಥರಾದರಿಂತೊರೆಯುತ್ತ ಭಗವಂತ!
ಸರ್ವ ಚೇತನಗಳನು ಕರ್ಣಗಳಲೊಟ್ಟಯಿಸಿ
ಕೇಳುತಿದ್ದಳೊ? ಅಮೃತ ವಾರಿಧಿಯ ವೀಚಿಯಲಿ
ತೇಲುತಿದ್ದಳೊ? ನುಡಿಯ ನಾದ ಹೃದ್ವೀಣೆಯಲಿ
ತಾಳುತಿದ್ದಳೊ? ತತ್ವದಾಸರೆಯ ದೆಸೆಗಾಗಿ
ಮಾಲುತಿದ್ದಳೊ? ದೇವಿ ಯೋಗನಿದ್ರಾನಂದ-
ವಾಳುತಿದ್ದಳೊ ಎನಲು ಕಾಯವಸೆ ಮರೆತಂತೆ,
ತಲೆದೂಗುತಿರುವಂತೆ, ಎದೆಯ ಪಡಿದೆರೆದಂತೆ,
ಪಾದದೆಡೆ ಸರಿವಂತೆ, ಕಣ್ಣರೆಯ ಮುಗಿದಂತೆ
ಕಾಣುವಳು; ಪುಣ್ಯವಾರಿಯ ಹೊನಲು ಹರಿದಿತ್ತು.
ಮಳೆಯಾದ ಬಳಿಕ ತಿಳಿಯಪ್ಪ ಆಗಸದಂತೆ,
ಕವಿದ ಮೋಡದ ಸಂದಿಯಿಂ ಸರಿದ ಶಶಿಯಂತೆ,
ರವಿ ರಶ್ಮಿಯಲಿ ಹಿಮವು ಹರಿದ ತಾವರೆಯಂತೆ,
ಮುಂಗಾರು ತಣ್ಪಿಸಿದ ಬಿಸುಪಿನುರ್ವರೆಯಂತೆ,

ಕೊಚ್ಚಿ ಹರಿದುಳಿದ ತಂಗೊಳದ ತಿಳಿನೀರಂತೆ,
ಕಿಲುಬು ಗಿಟ್ಟವ ಕಳೆದ ಹರಿವಾಣ ಹೊಳೆವಂತೆ,
ಧೂಳಿಟ್ಟಣಿಸಿದ ಮಣಿದರ್ಪಣವ ತೊಳೆದಂತೆ,
ಅಮೃತಕರನರಳಿಸುವ ಕುಮುದ ವಿಕಸನದಂತೆ
ಶಾಂತ ನಿರ್ಮಲ ಕಳೆಯ ತಿಳಿಯಮುಖಮಂಡಲವು
ತೊಳಗಿತ್ತು; ಖಿನ್ನತೆಯ ಕೇತನವು ಕಳಲಿತ್ತು.

"ಪತಿಗೆ ಬೇಡದೆ ಹೋದೆನೆಂಬ ಪರಿತಾಪದಲಿ
ನೊಂದ ಜೀವವು ತಣಿಯಿತಿಂದು ಉಪದೇಶದಲಿ,
ಗುರುದೇವರಿತ್ತ ಉಪದೇಶವೆಂದೇ ಇದನು
ಶಿರದೊಳಾನುವೆನಿನ್ನು ದೀಕ್ಷೆ ಕರುಣಿಪುದೆ''ಂದು
ಕರವ ಮುಗಿಯಲು ದೇವಿ; ಅರಸನಿಂತೊರೆಯುವನು–
"ಪ್ರಾಣೇಶ ಸನ್ಯಾಸಗೊಂಡನೆಂಬುದ ಕೇಳಿ-
ದೊಡನೆ ತನ್ನಿರವಿನರಿವನ್ನೆ ಮರೆದೀ ಸಾಧ್ವಿ
ನವೆದ ನೋವನ್ನಿನ್ನು ಏನೆಂದು ಬಣ್ಣಿಸಲಿ?
ಸಿದ್ಧಿಯೆನಲಿನಿತು ಕಾಲದ ತಪೋನಿಷ್ಠೆಗಿದು
ಉದ್ಧರಿಸುವುದು ಭಿಕ್ಷುಣಿಯ ದೀಕ್ಷೆಯನ್ನಿತ್ತು."

ಆನಂದನಾಗ ಆನಂದದಲಿ ಮುಂಬಂದು,
"ಗುರುದೇವನೇ ಮೊದಲ ಭಿಕ್ಷುವಾದಂತೀಗ
ಗುರುಪತ್ನಿಯೇ ಮೊದಲ ಭಿಕ್ಷುಣಿಯು; ಅಂತಾಗೆ
ಸರ್ವರಿಗು ಸಂತೋಷವಿದುವೆ ಯೋಗಾಯೋಗ."
ಎನಲು ದೇವನು ಕಿರಿದು ಖಿನ್ನತೆಯ ಮೊಗವಾಂತು
"ಇಂತು ಭಿಕ್ಷುಣಿ ವೃಂದ ಸಂಘಟನೆಯಲಿ ಮುಂದೆ
ಜಟಿಲವಪ್ಪುದು ಧರ್ಮ ಶಿಥಿಲವಪ್ಪುದು ಕರ್ಮ,
ಕಠಿಣವಾಗುವುದು ಕಾಯುಲ್ಕೆ ಸತ್ಕೃತಿ ನಿಯಮ,
ಹಾದಿ ದುರ್ಘಟವಾಯ್ತು ಆಧರಿಸೆ ಸಂಯಮವ,
ಆದರೂ ಆಗದೆನಲಾರೆ ನಿಮ್ಮಾಶಯವ.

ಸ್ತ್ರೀಯನರ್ಹಳು ದೀಕ್ಷೆಗೆನಲು ಸರಿದೋರದಿದೆ;
ದೇವಿ ಭಿಕ್ಷುಣಿಯಾಗಿ ಇಲ್ಲುಳಿದು ಗುರುವಿನೀ
ಗುರುವಾದ ಹಿರಿಯರನು ಸೇವೆಯಲಿ ತೋಷಿಸಲಿ."
ಎನೆ; ಪಡುವ ನೇಸರಿನ ಹೊಂಗಿರಣ ಕಿಂಡಿಯಲಿ
ಮೊದಲ ಭಿಕ್ಷುಣಿ ಯಶೋಧರೆಯ ಹಿಂದೆಸೆಯಲ್ಲಿ
ತೂರಿ, ಪ್ರಭಾವಲಯದಂತೆ ವರ್ತುಲವಾಗಿ
ತೋರಿ, ಸ್ಫಟಿಕ ಭಿತ್ತಿಯಲ್ಲಿ ಮರುಕೊಳಿಸುತ್ತ,
ಬುದ್ಧದೇವರ ಮೈ ಮನದ ತ್ಯಾಗ ಮೈಮೆಯೇ
ಹಬ್ಬಿಹುದು ಕರಗಿ ಹೊನ್ನೀರಾಗಿ ಎನುವಂತೆ,
ನಿಬ್ಬರದೊಳೋವರಿಯ ತೀವಿ ಕೆಂಚಿಡಿದಿತ್ತು.

ಜಯಲೋಕ ಉದ್ಧಾರಕರ್ತ ಕರುಣಾಮೂರ್ತಿ.
ಪತಿತಪಾವನ ಜಗನ್ಮಿತ್ರ ಪರಿವೃತ ಕೀರ್ತಿ.
ಎರಡು ಸಾವಿರದ ಐನೂರು ವರುಷಕೆ ಹಿಂದೆ
ಗುರುದೇವರಿಂತು ಶಯ್ಯಾಗಾರಕೈತಂದು
ಪರಮ ಶ್ರಮಣ ದೀಕ್ಷೆಯನು ಯಶೋಧರೆಗಿತ್ತು
ಪೊರೆದಿಹರು; ತಮ-ತಮಿಸ್ರದ ಬಲೆಯ ತರಿದಿಹರು.
ಹರಿದು ಕತೆಯಾಗಿ ಕಂನುಡಿಯು ಕಟ್ಟನೊಳಿಂತು
ಸರಳತೆಯ ಸೌಲಭ್ಯದೊಪ್ಪ ಲೆಪ್ಪವನಾಂತು
ಮೆರೆಯೆ, ತಕ್ಕಿನ ಕಣಜವಾಕೆ ಸೈಪಿನಗಣಿಯು
ವರ ಯಶೋಧರೆ ರಾಣಿಯೇ ಮೊದಲ ಭಿಕ್ಷುಣಿಯು.



# ಪ್ರಸನ್ನ ಕಲ್ಪನ

– ೧ –

ರಾಮಚಂದ್ರನಾಗಮನ ವಾರ್ತೆ ಕೋಸಲದಿ ಹರಡಿಹೋಯ್ತು,
ರಾಮ ರಾಮ ಜಯ ರಾಮನೆಂಬ ಘೋಷಗಳೆ ಸುತ್ತುಮುತ್ತು!
ಮೋದ ವಾರ್ಧಿ ಮೊರೆ ಮೊರೆದು ಕ್ಷೀರಸಾಗರದ ಸಮಕೆ ನೊರೆದು,
ನಾಗರಿಕರ ಎದೆ ತುಂಬಿ ಹರಿದು ಕೃತಿ ಧನ್ಯಭಾವ ಬೆರೆದು.

ಮೆಲ್ಲನೆದ್ದು ಕೌಸಲ್ಯೆ ತನ್ನ ಕಣ್ಣೊರಸಿ ತಲೆಯ ಬಾಗಿ,
ಕೈಯ್ಯ ಮುಗಿದು ಕುಲದೈವವನ್ನು ಬೇಡಿದಳು ಕೊನೆಯದಾಗಿ,
ಆ ಸುಮಿತ್ರೆ ಮಂಗಳ ಸುಗಾತ್ರೆ ಲಕ್ಷ್ಮಣನು ಗೈದ ಯಾತ್ರೆ –
ಯನ್ನು ತಾನೆ ಗೈದಂತೆ ಪುಳಕಗೊಂಡಿದ್ದಳಾ ಪವಿತ್ರೆ.

ಕೈಕೆ ತಾನೆಯೋಡೋಡಿ ಮುಗ್ಗರಿಸಿ ನಂದಿಗ್ರಾಮದೆಡೆಗೆ,
ತ್ಯಾಗಯೋಗದಲಿ ರಾಜ್ಯಭೋಗವನು ಕಾಂಬ ಭರತನೆಡೆಗೆ
ಅರುಹಲೆಂದು ಕೊರಳೆತ್ತಿಯೆತ್ತಿ ಮಾತಿಲ್ಲವಾಗೆ ಕಡೆಗೆ
ಕೈಯ ಸನ್ನೆಯಲೆ ಅರಿತುಕೊಂಡ ಪರಿವರ್ತನೆಗಳ ಬಗೆಗೆ!

ಮೊದಲು ಬೆಚ್ಚಿ ಮತ್ತೊಮ್ಮೆ ನಾಚಿ ಕೊನೆಗಂತು ತಾನೆ ಮೆಚ್ಚಿ,
ಹೃದಯವಿಂತು ಬದಲಿರುವ ತಾಯ ಕಾಣುತ್ತೆ ಬೊಟ್ಟು ಕಚ್ಚಿ,
"ರಾಮ ರಾಮ ಜಯ ರಾಮ ರಾಮ ಸಾಕೇತ ರಾಜ್ಯ ರಾಜ"
ಎಂದು ನಲಿದನಾ ಭರತನಂತು ಆ ಬಂಧುಪ್ರೇಮ-ಬೀಜ.

ನಗರವೀಥಿಯಲಿ ತಳಿರು ತೋರಣಗಳೆದ್ದು ಮುಗಿಲದೆಸೆಗೆ
ತಲೆಯ ನೀಡಿ ಇಣುಕಿದವು, ಕಹಳೆ ಮೊಳಗಿದವು ಗಳಿಗೆ ಗಳಿಗೆ.
ಅಂಗಣಂಗಣದಿ ರಂಗವಲ್ಲಿಗಳು ಕಂಗೊಳುತ್ತಲಿರಲು,
ಮಂಗಳಾಂಗಿಯರು ಕಳಸಗನ್ನಡಿಯ ಹಿಡಿದು ಕಾಯುತಿರಲು,
ಸುಳಿವ ಗಾಳಿಯೋ ಅಳಿಗಳೋಳಿಯೋ ಎಲೆಯ ಮರ್ಮರಗಳೋ
ಸುದ್ದಿಯೊಂದೆ; ಸಾಕೇತವಿಂತು ಸಗ್ಗಕ್ಕೆ ಸಂದಿತೆಲ್ಲೊ!

*    *    *    *    *

ಆದರೇನು ಕಂದಿರುವ ಪಾಂಡುರೆಯ ಕಣ್ಣನೀರ ಕೆನ್ನೆ
ಆದಿಯಂತವೇ ಅರಿಯದಂಥ ನಿರ್ಜೋರ್ಥದೊಂದು ಚಿಹ್ನೆ!
ಕಂಡು ಕೇಳದಾ ಕೇಳಿ ಕಾಣದಾ ಒಂದೆ ಹೆಣ್ಣು ಜೀವ
ಸಂದಿತೆಲ್ಲಿಗೋ ನೊಂದು ಬೆಂದ ಊರ್ಮಿಳೆಯ ಜೀವ ಭಾವ!

ಕೊಂಬುದನಿಯು, ಬಿರುಭೇರಿನಾದ, ದಾಸಿಯರ ಕಲಕಲಾಟ
ಸಂಭ್ರಮಂಗಳಾ ಸಾಧ್ವಿರತ್ನವನ್ನಲುಗಲಿಲ್ಲ ಕೂಡ!
ನಿನ್ನೆಯಂತೆ ಇಂದೆಲ್ಲವಾಕೆಗೆನೆ ಹೆಚ್ಚು-ಕಡಿಮೆಯಿಲ್ಲ,
ಬದ್ಧವಾದ ಹೃದ್ಭಾವವಾಕೆಯನು ಬಿಟ್ಟು ಚಲಿಸಲಿಲ್ಲ.

ಎಲ್ಲರಂತೆ ಹೆಣ್ಣಾಗಿ ಒಂದನೂ ಅರಿಯದಿರುವ ಚೋದ್ಯ
ಹಿಂದೆ ಹಿಂದೆ ಹದಿನಾಲ್ಕು ವರುಷಗಳ ಅಂದಿನಿಂದ ಸಾಧ್ಯ!
ದೇಹವೊಂದೆ ನಿಂತಿರುವುದಂತೆ ಮಾಯೋಗ ಮಾಯೆಯಂತೆ,
ಜೀವ ಭಾವ ಸಂಬದ್ಧವಾಗಿಯೂ ಶಿಲೆಯ ಪುತ್ರಿಯಂತೆ.

ತನ್ನ ಜೀವನೋದ್ಯಾನ ವನದ ಮಧುಮಾಸವನ್ನೇ ಇಂತು
ಶೂನ್ಯಳಾಗಿ ಕಳೆದವಳು ಇಂದು ಸಂಬೋಧಗೊಳುವುದೆಂತು?
ನೋವಿನಲ್ಲಿಯೂ ನೋಯದಿದ್ದ ಹೃದ್ಭಾವವಿರಲಿಕಿಂತು
ಭಾವ ಜನ್ಯ ಸಂತೋಷವಾರ್ತೆ ಸಲೆ ಸುಖವನೀವುದೆಂತು?

* * * * *

ಅಂದು ರಾಮ ವನವಾಸಕೆಂದು ನಿರ್ಧರಿಸೆ, ತನ್ನ ಪತಿಯು
ಸುಂದರಾಂಗ ಲಕ್ಷ್ಮಣನುಮೊಡನೆ ಹೊರಟಿದ್ದು ನಿಂದ್ರಸ್ಥಿತಿಯೂ
ನೋವನೀವ ಬದಲಾಗಿ ಊರ್ಮಿಳೆಗೆ ಭಾವವರಳಿ ನಿಂದು
ತನ್ನನೊಯ್ವನೆಂದೆಂಬ ನಂಬುಗೆಯು ಹೂವ ಚೆಲ್ಲಿದತ್ತು.

ಪತಿಯ ಜೊತೆಯು ಸೌಭಾಗ್ಯವರಮನೆಯ ಭೋಗಕಿಂತ ಹಿರಿದು,
ಜೊತೆಗೆ ಜಾನಕಿಯು ಜೋಡಿಯಿರಲು ಮತ್ತಾವ ಭಾಗ್ಯವಿಹುದು?
ರಾಮ ಹೊರಟನೆಂದೆಂಬ ವಾರ್ತೆಯಾ ಶೋಕದೊಡನೆ, ತನ್ನ
ಸ್ವಾಮಿ ವಾರ್ತೆಯಿಂ ತುಂಬಿ ಬಂತು ಆನಂದಬಾಷ್ಪ ಕಣ್ಣ!

ಚೆಲುವೆ ಒಲಿದು ನಲಿನಲಿದು ನಾರುಮಡಿಯುಟ್ಟು ಸಿದ್ಧಳಾಗಿ,
ಗೆಲವಿನೆಳೆಯ ಹೂವಳ್ಳಿಯಂತೆ ಏಕಾಂತದಲ್ಲಿ ಹೋಗಿ –
"ನಲ್ಲ ಲಾಲಿಸೈ ಸೊಲ್ಲ ಪಾಲಿಸೈ, ಬರುವೆ ನಿನ್ನ ಬೆನ್ನ"
ಎನಲು ದೊರೆತ ಉತ್ತರವೊ 'ಕಿಡಿನುಡೀ' ಆತನಿಂದ ಚೆನ್ನ?

ಅಂಬುಜಾತ ಪುಟದಲ್ಲಿ ಸಿಡಿಲ ಮರಿ ತುಂಬಿ ಹೊಕ್ಕಿದಂತೆ,
ಕಂಬುಕಂಧರೆಯ ಕರ್ಣಪುಟಕೆ ಕಡು ಕಾದ ಸೀಸದಂತೆ,
"ನಿಲ್ಲು ಬಾರದಿರು, ಸೊಲ್ಲ ಮೀರದಿರು, ನಲ್ಲನಾಜ್ಞೆಯಿಹುದು"
ಎನೆ, ಕಠೋರ ನುಡಿ ಬೆಂಕಿಯಿಂದ ಬಾಳ್ವಳ್ಳಿ ಹೋಯ್ತು ಬೆಂದು.

ಕೇಳಿದೊಡನೆ ಅರೆಗಳಿಗೆ ಹೃದಯ ತಂತಾನೆ ಸ್ತಬ್ಧವಾಯ್ತು;
ಆಲಿ ತಿರುಗಿ ಬಲ್ಬವಳಿ ಬಂದು ಕಣ್ಣಿನಿಸು ಕಾಣದಾಯ್ತು;
ಬೇಡಲಿದ್ದ ಬಾಯ್ ಕಾಡಲಿದ್ದ ಕೈಯಂತೆ ತೆರೆದು ನಿಂದ,
ಬೇಡದಾದಳೈ ಕಾಡದಾದಳೈ ತನ್ನ ತಾನೆ ಮರೆದು!

ಇಂದ್ರಿಯಂಗಳಳಿದಿತ್ತು, ಕರಣ ಚೆಲ್ಲಿತ್ತು, ವಿಧಿಯೆ ಕಷ್ಟ!
ನಿಂದಳಂತೆ; ಲಕ್ಷ್ಮಣನು ಬೆಂದಿರುಹಿ ಮುಂದೆ ನಡೆದೆ ಬಿಟ್ಟ!
ಅಂದಿಗಿಂದು ಹದಿನಾಲ್ಕು ವತ್ಸರವೆ ಕಳೆಯಲೊಲ್ಲವೇಕೆ –
ಯುಗ ಯುಗಂಗಳೇ ಉರುಳಿ ಹೋದರೂ ಅರಿವುದೆಂತು ಆಕೆ?

ನೆಗೆದು ನಿಂದ ನರ, ಯಾಚಿಸಿದ್ದ ಕರ, ಕೆದರಿದಾಗ ಹಿಂಗಿ
ಹಿಂದೆ ಸರಿದು ನಸು ಬಾಗಿ ಬೇಡಿದಾ ದೀನ ಭಾವ ಭಂಗಿ,
ಕೆದರು ಕೇಶ, ಬಲ್ಬೆದರುಗಣ್ಣು, ತಾನುಟ್ಟ ನಾರ ಸೀರೆ,
ಅಂದು – ಇಂದು ಅಂತರವೆ ಇಲ್ಲ ಕಣ್ಣೀರ ಕೋಡಿ ಧಾರೆ.

– ೨ –

**ನ**ಗರದಲ್ಲಿ 'ಶ್ರೀರಾಮ ಜಾನಕೀ ರಾಮ' ಎನುತ ಜನರು
ಬಗೆಯ ಬಗೆಯ ಸ್ತೋತ್ರಂಗಳೆಸಗಿ ತಾವಿದಿರುಗೊಳ್ಳುತಿರಲು,
ರಾಮ ನಡೆದ ಹುಡಿಯಲ್ಲಿ ಭರತ ಹೊರಳಾಡಿ ಬರುತಲಿರಲು,
ಬಂಧು ಜನರು, ಪುರಜನರು ಬೇರೆಬೇರಾಗಿ ನಲಿಯುತಿಹರು.

ಆದರೇನು? ಲಕ್ಷ್ಮಣನ ಹೃದಯಕಿಂತೇಕೆ ಮರುಕ ಶೋಕ?
ವೇದನೆಯನು ತಾಂ ತಾಳದಾದ, ಮಾತಿಲ್ಲವಾಗಿ ಮೂಕ!
ತಾಯಿಯರನು ತಮ್ಮಂದಿರನ್ನು ಇನ್ನುಳಿದ ಬಂಧುಗಳನು
ಕಂಡನಾದರೂ ಅರಸುತೇನನೋ ಸುತ್ತುತಿತ್ತು ಕಣ್ಣು.

ಎಲ್ಲಿ ತನ್ನನಪ್ಪಿದ್ದು ಹರಡಬಂದಿದ್ದ ಬಾಳ ಬಳ್ಳಿ?
ತನ್ನ ನೆಚ್ಚಿಕೆಯ ಪ್ರಾಣಪದಕವಿಂದೆಲ್ಲಿ? ಎಲ್ಲಿ? ಎಲ್ಲಿ?
ಎಣಿಸುತಿಂತು ಹುಚ್ಚಿದ್ದು ಮನವು ಉದ್ವಿಗ್ನವಾಗಿ ಹೋಯ್ತು!
ಕನಸಿನಂತೆ ತಾನಂದು ಕೊಟ್ಟ ಕಟ್ಟಾಜ್ಞೆ ನೆನಪು ಬಂತು.

ಅಂದಿನಾಕೆಯಾ ದೀನ ಯಾಚನೆಯ ಚಿತ್ರ ಕಾಣುತಿತ್ತು.
ಕರುಳ ಕೊರೆವ ಕಡು ಕರುಣೆಯಿಂದು ಕಣ್ಣಲ್ಲಿ ಹರಿದು ಬಂತು.
ನಿಲ್ಲದಾದ ಅರೆಗಳಿಗೆ, ತನ್ನ ತಾನೊಲ್ಲದಾದ, ಕೊನೆಗೆ
ಹಾರಿ ಕೆಳಗೆ ರಥದಿಂದೆ ಓಡಿ ಓಡೋಡಿ ಬಂದ ಮನೆಗೆ.

ಕರೆವ ಕಂಠ ಗದ್ಗದಿತವಾಗಿ ಕರೆಕರೆದು ಕೂಗಿಕೊಂಡ;
ಅರಸಿ ಅರಸಿ ಉಪ್ಪರಿಗೆಯೇರಿ ಕೆಳಗಿಳಿದು ಸುತ್ತಿ ಬಂದ;
ಒಳಗೆ ಒಳಗೆ ಒಳಮನೆಯ ಒಳಗೆ ಮತ್ತೊಮ್ಮೆ ಓಡಿಹೋದ;
ಅಲ್ಲಿ ಆ ಮಹೋನ್ನತಿಯ ಪ್ರೇಮಯೋಗಿನಿಯ ಕಂಡು ನಿಂದ!

ಬಾಚಿ ತಬ್ಬಿ ತಕ್ಕಯಿಸಿ ತಲೆಯ ಸವಸವರಿ, ಕಣ್ಣನೊರಸಿ,
ಜಾರಿ ಹೋದ ನರುನಾರುಮುಡಿಯ ಸಲೆ ತಾನೆ ಸರಿಯಗೊಳಿಸಿ,
"ನನ್ನ ಚಿನ್ನ – ಓ, ಪ್ರಾಣಪದಕ, ನೀ ಬನ್ನ ಪಟ್ಟೆಯಲ್ಲ!
ಮುನಿಯಬೇಡ, ಕ್ಷಮಿಸೆನ್ನ, ಮುಂದೆ ನಾನಿಂತು ತೊರೆವುದಿಲ್ಲ."
– ಎನ್ನುತಿರಲು ಕಣ್ಣೆಂಬುದೊಂದು ಕಾಸಾರವಾಗಿ ಹೋಯ್ತು
ತನ್ನ ತಾನೆ ಸಂತೈಸುವಂತೆ "ಅಳಬೇಡ" ಎಂದುದಾಯ್ತು.

* * * * *

ಇತ್ತ ಊರ್ಮಿಳೆಗೆ ಸ್ಪರ್ಶದಿಂದ ಸಂಪ್ರಜ್ಞೆ ಮರಳುತಿತ್ತು.
ಹೋದ ಬೋಧ ತಂತಾನೆ ಮರಳಿ ನಸುವಾಗಿ ಅರಳುತಿತ್ತು.

ನಿಮಿಷ ನಿಮಿಷಕೂ ದೇಹವರಳಿ ಸಂಜ್ಞೆಯನು ತಾಳುತಿತ್ತು.
ಬಿಟ್ಟ ಕಣ್ಣ ಆ ನಟ್ಟ ನೋಟವಿನ್ನೇನೊ ಹೇಳುತಿತ್ತು.
ಗುರುತಿಸಿದಳು ಪ್ರಿಯಕರನ ಮೊದಲು, ಮಗುಳಂತೆ ಇಹವ ಮತ್ತೆ!
ಚಿರದ ಪರಿಚಯದ ಮೇಲೆ ನೂತನದ ಗುರುತು ಹತ್ತಿದಂತೆ.
ನಿರ್ವಿಯೋಗದಲಿ ಮಿಲನವೆಂಬುದಕೆ ನವ್ಯ ಭಾವವುಂಟೆ?
ಆದರೇಕೆ ಅರಿವಿಲ್ಲದಾಕೆ ಅಂತೇಕೆ ಅತ್ತಳಂತೆ?

"ಪ್ರಾಣದೇವ ಬಿಡಬೇಡ ಎನ್ನ ಬಿಟ್ಹೋಡಬೇಡ ಕಾಡ
ನಿನ್ನ ಹೊಂದಿರುವ ಎನ್ನನಿಂತು ದೂರ ದೂಡಬೇಡ"
ಹಿಂದಿನಂತೆ ಮತ್ತೊಮ್ಮೆ ಗೋಳ್ಗರೆದು ಬೇಡುತಿರಲು ಕಾಂತೆ,
ಸಂದ ಕಾಲದರಿವಿಲ್ಲವೆಂಬುದಕೆ ಸಾಕ್ಷಿ ಬೇಕೆ ಮತ್ತೆ?

"ಹುಚ್ಚು ಹುಡುಗಿ ವನವಾಸ ಕಳೆದು ಬಂದಿಹೆನು ಕಾಣೆ ನಿನ್ನ
ಬೆಚ್ಚು ಬಗೆಯ ಬಿಡು, ನೆಚ್ಚನುಳಿಯದಿರು, ಮುಂದಕಿಲ್ಲ ಬನ್ನ"-
ಎನ್ನುತಿರಲು ಲಕ್ಷ್ಮಣನ ಕರುಳ ಕೂರಲುಗು ತಿವಿಯುತಿತ್ತು.
ಪುಣ್ಯ ಭಾವ ರಸವಾಗಿ ಕಂಗಳಲಿ ತಾನೆ ಹರಿಯುತಿತ್ತು.

"ಹಾಸವೇಕೆ? ಮರೆಮೋಸವೇಕೆ? ಹುಸಿ ಬಾಸೆಯೇಕೆ ನಲ್ಲ?
ಬರುವೆನೆಂದು ನಾನೆನ್ನನಿಂತು ನೀ ಹುಸಿಯುತಿಹುದು ಸಲ್ಲ"-
ಎಂದು ಕಾಲ ಹಿಡಿದುರುಳಿ ಹೊರಳಿ ಮರಮರಳಿ ಕಾಡಿಬೇಡಿ,
ನಿಂದ ಕಾಂತೆಯನ್ನೆಂತು ಸಾಂತ್ವನಗೊಳಿಸಬೇಕು ತೀಡಿ?

ಸರ್ವ ಸಂಗ ತೊರೆಯುತ್ತ ಯೋಗದಲಿ ಸಿದ್ಧಿ ಕಂಡ ಋಷಿಗೆ
ನಿಷ್ಠೆಯಾದಿ ನಿಶ್ಚಲ ಸಮಾಧಿಯಲಿ ಕಡಿಮೆಯೇನು ಈಕೆ?
ಎಂಥ ಭಕ್ತಿ, ಆವಳಾತ್ಮ ಶಕ್ತಿ? ಬೆರಗಾಗಿ ಸನಿಹ ಸಾಗಿ,
ಕೈಯ ಜೋಡಿ ತೋಳೆತ್ತಿ "ದೇವಿಯೇ" ಎಂದ ನಮ್ರವಾಗಿ.

ಹೆಜ್ಜೆ ಹೆಜ್ಜೆಯಲಿ ನೆಲವೆ ಹೂವಿನಂತರಳುತರಳುತಿತ್ತು
ಕಣ್ಣ ಕಾಣ್ಕೆಯೋ - ಜನ್ಮ ಜನ್ಮಗಳ ಜೊತೆಯ ಬೇಡುತಿತ್ತು.
ಧನ್ಯಭಾವ ಸಾಗರದಿ ಚಕ್ರವಾಕಂಗಳೀಜುತಿದ್ದು,
ಲೋಕ ಲೋಕವೇ ಬುದ್ಬುದಂಗಳಂತಾಗಿ ನೊರೆಯುತಿತ್ತು.

# ಚಿತಾಗ್ನಿ

— ೧ —

'ಮಧು ಮಾಸ ಮಧುಮಾಸ'ವೆಂದುಲಿವ ಕೋಗಿಲೆಯ
ಮಧುರ ಕಂಠದ ಪರಿಯ, ಪರಮೆಯಿಂಡಿನ ಮೊರೆಯ,
ಚಿಗರೆ ಕಿವಿ ನಿಗುರೆ ಕೇಳಲ್ಕೆ; ತಂಗೊಳ ಪಳ್ಕೆ-
ಯಲಿ ಚಕೋರವು ನೆರೆಯೆ, ನೀರ್ತಳದೆ ವಲಿ ಸರಿಯೆ;
ಬಳಿವಿಡಿದು ಭೃಂಗಾಳಿ ಸುಳಿಯುತಿರೆ, ತೆಂಗಾಳಿ
ಅರಳಿದಲರಿನ ಪರಿಮಳವ ಕೊಳಲು ಪೊರೆಯೇರಿ;
ತಳ್ಕಿ ತರು-ವಲ್ಲರಿಗಳೊಲೆಯೆ ಪುಳಕಂಗೊಂಡು;
ಅಳ್ಕರಿಂ ನಲಿವ ನವಿಲೆಸೆಯುತಿರೆ ಹೆಣ್ಗಂಡು;
ಮಾವಿನೆಳಗೊನರಗಿದ ಪುರುಳಿ ನಾಲಗೆಕೆರೆಯೆ;
ಸೋವರಿದ ಕತ್ತುರಿಯ ಮಿಗವೆದ್ದು ತಿರಿತಿರಿಯೆ;
ಕೊಳದಂಚಿಗಳು ಕೊರಳ ಹೆಣೆಯುತಿರೆ ಬೇಟವೆನೆ;
ಎಳೆಯ ಸಾಧಕ ಜನದ ಒಳಹೊರಗು ಕಾಟವೆನೆ
ತಳುವಿದರು ತಣ್ಣೀರ ಮಿಾಹದಲಿ ನಿಡುಗಾಲ;
ಹೂಹೆಣೆದು ಸಿಂಗರಿಸಿಕೊಳಲು ಮುನಿವಧುಜಾಲ,
ನಿಡುಸಮಾಧಿಯನಿಳಿಸಿ ಮಡದಿಯರ ದೆಸೆಯತ್ತ
ಕಡೆಗಣ್ಣ ಚಲಿಸೆ ತಾಪಸರೊಸೆವ ನಲ್ನೋಟ;
ಬರೆ ವಸಂತಾಗಮನವಂತು; ತಿರೆ ಸೊಗವಾಳಿ
ಚಿರ ಕನ್ಯೆ ವನಲಕ್ಷ್ಮಿ ಮೊದಲಗಿತ್ತಿಯ ಹೋಲಿ
ಕೆಂಗೊಳಿಸೆ, ತಳಿರುಡೊಗೆಗಲ ಪುಷ್ಪಗಳ ಕೇಲಿ
ಸಂಗಳಿಸೆ, ಅಗರು ಲೇಪನವಾಗೆ ವಾತಾಲಿ
ಕುಸುಮ ಕೇಸರ ಧೂಳಿಯಲಿ ಕದಡಿ ದಳವೇರಿ
ಜೃಂಭಿಸಿತು.

ಶತಶೃಂಗ ಪರ್ವತದ ತಪ್ಪಲಲಿ
ಪರ್ಣಕುಟಿಯಿದಿರಲ್ಲಿ ಪಾಂಡು ಭೂಪತಿ ತನ್ನ
ಸ್ವರ್ಣ ಸುಂದರವಾದ ಗತ ಜೀವನ ಧ್ಯಾನ
ಗೈಯ್ಯೆ; ನೆನಹೋವರಿಯ ಜವನಿಕೆಯ ತೆರೆವಂತೆ;
ಪುಯ್ಯೆ, ಹಿಂದಾದುದನ್ನಿಂದಿದಿರು ಮೆರೆವಂತೆ
ತೊಯ್ಯೆ ಕಂಬನಿ ಕಪೋಲವ, ತನ್ನ ಮನದಲ್ಲಿ
ಭೋಗ-ಭಾಗ್ಯಂಗಳಾ ಕಾಲಾಬ್ಧಿ ವೀಚಿಯಲಿ
ಕೊಚ್ಚಿ ಹೋದುದ ನೆನೆಯುತಿರಲೊಮ್ಮೆ ನಿರ್ಧಾರ-
ಕೆಚ್ಚು ಬಲಿಯುವುದಿಂತು:- "ನಿಸ್ಸಾರ ಸಂಸಾರ,
ಬೆಳಕಿಂಗೆ ಯಮಳಾದ ಕತ್ತಲೆಯ ನೆರಳಂತೆ
ಸುಖ-ದುಃಖ ಸನ್ಮಾನ-ದುರ್ಮ್ಮಾನವದರಿಂದೆ
ಕಾಮನೆಯ ವಾರುಹಕೆ ಹಲ್ಲಣಿಗೆ ಬಿಗಿದೊತ್ತಿ
ತನ್ನರಿವ ಗುರುಗೈಯೆ ಸಾನಂದ ಬೆಂಬತ್ತಿ
ಸಲಲದೇ ಹಿರಿಬಾಳು, ಮಿಕ್ಕೆಲ್ಲ ಬರಿಗೋಳು........"
ಒರ್ಚಣಕೆ ಹಠಚಿತ್ತವಿಂತೊರೆದರೂ ನಿಜಕೆ
ದೃಢ ಚಿತ್ತವಪ್ಪನಕ ಕಾಡದಿಹುದೇ ಬಯಕೆ?
ಮಾನವನ ಸಹಜ ದೌರ್ಬಲ್ಯದಾ ತಳಮಳಿಕೆ?
ಕಾಲಚಕ್ರಕೆ ತನ್ನ ಬಾಳ ದಾರವು ಸುತ್ತಿ
ಸಿಂಬಿಯಾಗಿರ್ದುದನು ಬಿಡಿಸುತಿರಲಾ ನೃಪತಿ,
"ನಗರ ಜೀವನ"ದಿಂದ "ಮೃಗಬೇಟೆ" ಪರಿಯಂತ
ಚಿತ್ರಮಾಲೆಯು ಬಗೆತಳದ ಭಿತ್ತಿಯಲಿ ವ್ಯಕ್ತ
ರೂಪೊಡೆದು ಪರಿಪಿಡಿಯೊಳಿಡಿಯಾಗಿ ಪಡಿಮೂಡಿ
ಕಂಡತ್ತು.

—"ಅರಸುತನವೇನು ಘನ! ವಂದಿಜನ
ನುತಿಗಾನ, ಹಿರಿಮಾನ, ಭರಿತಭಂಡಾರ ಧನ!
ಸಂಭಾವಿಯನು ಸಂಪ್ರತಿಯ ಪಾಕದೊಳಗದ್ದಿ

ಸವಿಸವಿದು, ವಿಧಿಯೆಂಬ ಬೊಮ್ಮ ಬರೆಹವ ತಿದ್ದಿ,
ಗೆಲವಿನಾ ಘೋಷಣೆಗೆ ರಾಜ್ಯಗಳನೊತ್ತೊತ್ತಿ,
ಹಿಗ್ಗಿ-ಹುಮ್ಮಸ ತಾನಗತಿಗೆ ನಲ್ಮೆಯ ಶ್ರುತಿಗೆ
ಸುಗ್ಗಿ-ಗಾನದ ಮೇಳ, ರತಿ-ರಾಗ, ಬಲ್ವಯಕೆ
ಮೆಯ್ಯಿಂದ ಮನದಿಂದ ಆನಂದ ಲಹರಿಯಲಿ
ಹಾಯಾಗಿ ಮೆರೆದಿರ್ದೆನರಸುಗೆಯ್ಮೆಯ ಭರದಿ!

ಹಳೆನೆನಹುಗಳೆ, ಮರುಕೊಳಿಸಿ ಬಾರದಿರಿ ಮನಕೆ,
ಆಳಲ ಪಾಕವನೆತ್ತಿ ತೋರದಿರಿ, ಮೂದಲಿಕೆ-
ಯಂತಕಟ! ಮೂಕ ಸಂಕಟಕೆ ಸಮಿದೆಯನೊಟ್ಟಿ,
ಚಿಂತಾಗ್ನಿಯನು ಚಿತಾಗ್ನಿಗೆ ಮಿಗಿಸಿ-ಸಮಕಟ್ಟಿ,
ಕೊರ್ವಿದಂದಿನ ಕಾಯವನು ಕೊರಡುಕೊಳ್ಳಿಯೆನೆ
ಗೈಯದಿರಿ."—ಎಂದು ಬೇಡುವನೊಮ್ಮೆ, ಮರುಚಣಕೆ
ಸುಯ್ಯೊಡನೆ ನೆನಹು ನವ್ಯತೆಯ ಗವುಸನು ತೊಟ್ಟು
ಒಯ್ಯೊಯ್ಯನೊಂದಾಗಿ ಕಣ್ಮುಂದೆ ಬರುತಿತ್ತು.

"ವಿಧಿಯ ಚದುರನು ಬಲ್ಲರಾರು? ಮೃಗಯಾ ಹುರುಡು
ಬರಲೇಕೆ? ಬಳ್ಳಿಮಾಡದ ಮರೆಗೆ ಹೆಣ್ಗಿಂಡು
ಬೆಳ್ಳಿರಲೆಯಿಂದದಲಿ ನಲ್ಲೆಯೊಡಗೂಡಿರ್ದ
ತವಸಿಯನ್ನಯ್ಯಯ್ಯೊ ಬಾಣಬಿಟ್ಟಿರಿದಿರ್ದ
ನೆವವಾಗಿ-ಹಾಲಾಹಲದ ಘಟವನೊಡೆದಂತೆ-
ಅಕಟಕಟ! ಎನ್ನ ಬಾಳಿನ ಬೇಟವನೆ ಕೊಂದೆ!

ಮುನಿಯಾದವನೆ ಮುಳುಗಿ ವಿಷಯಪಂಕದೊಳಿರಲು
ಮುನಿಯದಿಹನೆಂತು? ರತಿಭಗ್ನದಾಹದ ರೊಚ್ಚು
ಧಾವವಾಯಿತು; ಶಮೆಯ ಶರಧಿಯನು ಕುದಿಸಿತ್ತು;
ದ್ವೇಷದುಬ್ಬರವೆದ್ದಿತೆನೆ ಸೇಡು ಸುಳಿಯಾಗಿ
ಬಿರುಗಾಳಿ ಬೀಸಿತ್ತು; ಎನ್ನ ಜೀವನ ವೃಕ್ಷ
ಸಮೂಲ ಕಿತ್ತಿತ್ತು ಶಾಪ ಹಾ! ಶಿವಶಿವನೆ!!

—ಪಾಪಿ! ಬೇಟದ ಬೇಗೆಯಲಿ ಬೆಂದು ಕುದಿವೆನ್ನ
ತೀರದಾಸೆಯ ಭವದ ಭೀಮ ಬೆಂತರ ಬೆನ್ನ
ಬಿಡದೆ ಸಂಶಯ-ಶಾಪ-ಶೂಲವಾಗಲಿ ನಿನ್ನ,
ಮೃತ್ಯುವಿನ ಬಿತ್ತು; ನೀ ಸಾವಿಗೊಂದೇ ತುತ್ತು;
ತೊದಲಾಗದೀ ಮಾತು ವಿಧಿನಿಯಮವೆಂದೆಣಿಸು.

ಮೆಲ್ಲೆಲರು ಸುಳಿವಾಗ ಮೊಲ್ಲೆದುಟಿ ಬಿರಿವಾಗ,
ಸಲ್ಲಲಿತ ಮಧುಮಾಸ ಲೀಲೆಯಿಂದೆಸೆವಾಗ,
ನಲ್ಲನಲ್ಲೆಯರಲ್ಲಿ ರತಿ-ರಾಗ ಬಳೆವಾಗ,
ಹುಲ್ಲು ಜಳ್ಳುಗಳಲ್ಲಿ ಅಮೃತರಸವರಿವಾಗ,
ವಲ್ಲಭೆಯ ತೋಳ್ಸೆರೆಯ ಕಲ್ಲಾಗು ಕಲ್ಲಾಗು.
ಆಸೆತೀರದ ಹೊರತು ಬಯಕೆಗೆಲ್ಲಿದೆ ಮರ್ದು?
ಆದರೂ ಬಗೆಯ ಬಿಗಿವಿಡಿದನಿತು ದಿನ ಬದುಕು;
ಅನುದಿನವು ಸುಡುಬೇಗೆಯಾಗಿರಲಿ ಚಿಂತಾಗ್ನಿ,
ಪ್ರಣಯಾಗ್ನಿ ಕಿಡಿಗೆದರಿ ಕೊನೆಗಕ್ಕೆ ಚಿತೆಯಗ್ನಿ!—

ಎನುವ ಶಾಪನಕೊಂಡು ಜವನ ಬಾರಿಯನಿಂದು
ತನಕವೀ ದೇಹದೀ ಹೊರೆಯ ಹೊರೆಯಲಿಕೆಂದು,
ನಾಡಿನರಮನೆಯ-ಸುಖ ಸಾಮ್ರಾಜ್ಯದಾ-ರಾಜ
ಕಾಡ ಗವಿಯಲಿ ತಪದ ಸೋಗುಗೊಂಡಿಹೆ ನೀಗ!
ನೆಮ್ಮದಿಯ ಚಣವಿಲ್ಲ, ಮನವು ಮಿದಿಯಲೆ ಇಲ್ಲ;
ತಪವೆ? ಸಂತಾಪವೇ ಹಿರಿಯ ನಂದಾದೀಪ;
ಉದ್ವೇಗ ದೂಪದುಮ್ಮಚ್ಚ ಗಂಧವ್ಯಾಪ;
ಗೋಣಗಾಟದುಮ್ಮಳದ ಮಂತ್ರ-ಅರ್ಚನೆ ತಂತ್ರ;
ಬೇಡವೆಂದರು ಮರೆಯದಿಹ ಸೊಗದ ನೆನಹುಗಳೆ
ಬಾಡಿಹೋಗದ ಪುಷ್ಪ; ಅಭಿಷೇಕವೇ ಬಾಷ್ಪ;
ಪರರ ಒಲವಿನ ಲೀಲೆಕೇಲಿಗಳ ಕಂಡೆದೆಯ
ವಿರಹ ಜ್ವಲನ ಮೌನ ಜಾನ; ನೀರೆಯ ತುಟಿಯ

ಸವಿಯು ನೆನಹೇ ಮನಸ; ಬಾಳುವೆಯು ಬೇಳುವೆಯು;
ಸ್ವಪ್ರಳಯ ಸಿದ್ಧಿ, ಕಾಲನ ಮೂರ್ತಿಯರ್ಚನೆಯು;
ತಪವೆಲ್ಲಿ? ತಾಪವಿದು ವಿಧಿಯ ಸಂಕೋಪವಿದು!
ಮುಪ್ಪು-ಸಾವುಗಳೇತಕೊಮ್ಮೆಲೇ ಬರದಿಹುದು?

ನಿತ್ಯನೂತನ ನಿಸರ್ಗದ ಲೀಲೆ ಸಾಗುತಿದೆ,
ಮಾಕಂದ ಕೈಬೀಸಿ ಮಲ್ಲಿಗೆಯ ಕರೆಯುತಿದೆ,
ಬಾನು ಬುವಿಯನು ಮಂದಹಾಸದಲಿ ನೋಡುತಿದೆ,
ವನದೇವಿ ತರುರಾಜಿಯೆಂಬ ಹರಿವಾಣದಲಿ
ಕೇದಳಿರ ಕುಂಕುಮಾಕ್ಷತೆಗೂಡಿಯೊಲವಿನಲಿ
ತನ್ನ ಕಾಂತನ ಬಸಂತನ ಬರವ ಕಾದಿಹಳು;
ಎನ್ನ ಮುಗುದೆಯರಾದರೋ ದೂರ ಸರಿಯುವರು;
ದೀನಾರ್ತರಾಗಿ ನಲ್ಮೆಯ ಕಣ್ಣ ತುಂಬುವರು;
ಆನೋಟದಲಗೆನ್ನ ಕರುಳಕೊರೆಯುತ್ತಿಹುದು.
ವಿಧಿಕೊಟ್ಟ ಹರೆಯಕ್ಕೆ ಮುಪ್ಪನ್ನೆ ಬೆಸೆದಿರುವೆ.
ಅಟ್ಟಡಿಗೆಯಿದ್ದರೂ ಉಣಲಾರೆ-ಹಸಿದಿರುವೆ.
ಅಮೃತ ಪಾನೀಯವಿದೆ-ಕುಡಿಯೆ-ಬಾಯಾರಿರುವೆ.
ಈ ಬಾಳು ಬಾಳಲ್ಲ; ಬರಿದೆ ಬದುಕಿನ ಸೋಗು!
ಇದರಂತ್ಯ ಸಾವಲ್ಲ; ಕೋಟಲೆಗೆ ಕೊನೆ-ಸಗ್ಗ."



— ೨ —

ಅತ್ತ ಪಾಂಡುವಿನ ಕಿರಿಯರಸಿ ಮಾದ್ರೀದೇವಿ
ಹರಿವ ನಿರ್ಝರದ ನಿರ್ಮಲ ಜಲಪ್ರೋತದಲಿ
ಮನವಾರೆ ಮುಳುಮುಳುಗಿ ಮಿಂದು ಮಡಿಯುಟ್ಟು ನಿಲೆ,
ಚೇತನವರೂಥದಲಿ ಉತ್ಸಾಹ ಕೇತನವು
ಮಿಳಿರಿತ್ತು. ಮಗಮಗಿಪ ಕೇದಗೆಯ ಕಂಡವಳೆ
ಬಳಿಸಾಗಿ ಕಿತ್ತು ನಿಡುಸುಯ್ದಳದ ಮುಡಿಗಿಟ್ಟು.
ಭಾರ್ಯೆಯರ ಮೈಸೋಕಬಾರದೆನ್ನುವ ಶಾಪ
ತನ್ನೆರೆಯನಿಂಗಂದು ತಟ್ಟಿದಿಂದಿನ ತನಕ
ಕರಣ ತಂತ್ರಿಯ ಕಡಿದು, ಕಲ್ಪನೆಯ ಕಾಲ್ತುಳಿದು,
ಭಾವನೆಯ ಬಿಗಿವಿಡಿದು ಬಯಕೆಗಳ ತಡೆತಡೆದು,
ಮೆಯ್ಯಂದ ಮನದಂದಗಳ ತಿಲಾಂಜಲಿಯೆರೆದು
ಬಹುಕಾಲ ಕಳೆದವಳು ಮರುಳಾದಳೇಕಿಂತು?
ಎಷ್ಟಾದರೂ ಹೆಣ್ಮನಸ್ಸು! ಸಿಂಗರ ಸೊಗಸು!!

ಭಾವ ಲಾವಾರಸದ ಸಹಜಗತಿಯನು ತಡೆಯೆ
ಆವ ಬಗೆಯಲಿ ತಾನೆ ಅಂಕೆಗೊಳಪಟ್ಟೀತು?
ಕೃತಕ ಕಟ್ಟನ್ನೊಡೆದು ದುಮುದುಮಿಸಿ ಮುಂಬರಿದು
ಕಾಲಾನುಕಾಲದಲಿ ಸರ್ವವನು ಸುಟ್ಟೀತು!
ಮಾದ್ರಿಯಾದರೊ ಮನದ ಮರುಳುಕುಣಿತಕೆ ತಾಳ
ತಟ್ಟಲೆಳಸಿದಳಲ್ಲ, ತಾನಾಗಿ ಕಾಮನೆಯ
ಕಟ್ಟೆಕಡಿಯಿತು, ಕೊಚ್ಚಿ ಕೊರೆಯಿತಾ ಬಗೆಯಾಳ.
ತಾನರಿಯದಿದ್ದ ತನ್ನೊಳಬಗೆಯ ಸಂತಸದ
ಬಿನದವೆನೆ ಕಿರುದನಿಯ ಮೆಲ್ವಾಡಗೊಣಗಿದಳು.
ಅದರ ಗುಂಗಿನ ಸವಿಗೆ ಸೋತು, ಸರ್ವವ ಮರೆತು,
ಕಣ್ಮುಚ್ಚಿ ಸರವೆತ್ತಿ ನಲ್ಗಾನ ಹಾಡಿದಳು.
ಹಾಡಿನಲೆಗಳು ತೇಲಿ ಕಾಡಿನಲಿ ಹಸಹಸರಿ

ತಳಿರು ಹೂವೊಗ್ಗುಗಳ ಮೃದುವಾಗಿ ತಡವುತಿರೆ,
ತನ್ಮಯಂಗೊಂಡಂತೆ ತಾವದಲಿ ಮಿಳಿರಿದವು.

ವಿಧಿವಶದ ವಾರ್ಧಿಯಲಿ ಸ್ವಚ್ಛಂದ ವೀಚಿಯಲಿ
ನೊರೆವ ಬುದ್ಬುದದಂತೆ ಸಂಯಮದ ಪಾಡಾಯ್ತು.
ಪುಳಕವೆದ್ದಿತು ಮೈಗೆ ಕಸುವುಗೂಡಿತು ಕೈಗೆ;
ನಿಗ್ರಹದ ಸುಡುಬೇಗೆ ಶರಣು ಬಂದಿತು ಸೊಗಕೆ.
ಆತ್ಮಾದಾಹಾರ ವೇದಾಂತ ಸಟೆಯೋ ದಿಟವೊ!
ಇಹದಾಸೆಯನು ಮೀವುದೇ ಧರ್ಮವೊಡಲಿಂಗೆ.
ಎರಡಕೊಂದೇ ತುತ್ತನಿತ್ತ ನಿಶ್ಚಲರಾರೊ!
ಏನೆಂದರೂ ಮಾದ್ರಿ ಅನುರು ಮಕ್ಕಳ ತಾಯಿ,
ಹೆಣ್ಣ ಜನ್ಮನವನ್ನು ಬಿಗಿಯಬಹುದೇ ಬಾಯಿ?

ಹಾಡು ಹಾಡುತ ಮುಂದೆ ಮುನ್ನಡೆಯೆ ಮಗ್ಗುಲಲಿ
ಕಣ್ಣ ಕೈಸೆರೆವಿಡಿದ ಕರ್ಣಿಕಾರದ ಹೂವು
ಕೊಯ್ದುದನು ಮೂಸಿನರೆ ಕಂಪಿಲ್ಲ; ಕಿನಿಸಿನಲಿ
ಕೆಕ್ಕರಿಸಿ ಕಿವಿಚಿಸೆದಳತ್ತ ಕೆಂಪಿಗೆ ರೋಸಿ.
ಮಂದಾರ ಮೊದಲಾದ ಮೋಹನದ ಮಲರುಗಳ
ಹೊರೆಗಟ್ಟಲೆಂದೇನೊ! ಕೈದಣಿಯೆ ಕೊಯ್ಕೊಯ್ದು
ಮುಡಿಯೆಡೆಗೆ ಸೂಡಿದಳು. ಮಾಲೆಕಟ್ಟಿದಳೆರಡು-
ತನ್ನ ಕೊರಳಿಂಗೊಂದು, ಮತ್ತೊಂದ ಮಾಮರದ
ಸೆಳೆಗೊಂಬಿಗಿಕ್ಕಿದಳ:-ಸೊಗದಾಟ ಮರುಳಾಟ!
ಉಬ್ಬಿದೆಯು ಸುಯಿಲ ಭಾರಕೆ ಜಗ್ಗಿ-ಮಿಡುಕುತಿರೆ,
ಬಿಸಿಯುಸಿರು ಸೂಸಲ್ಕೆ, ಅದರ ಜೇಗೆಗೆ ಕರಗಿ
ಮುತ್ತು ನೀರಾದಂತೆ ಕಣ್ಣೀರು ಹನಿದತ್ತು.
ಕೆನೆ ಕಪೋಲವು ಕೆತ್ತು ಕೆಂಪೊಡೆದು ರಂಜಿಸಿತು.
ಭಾವರಸವೊಸರಿ ಬಿಂಬಾಧರವ ನಾಂದಿಸಿತು.
ನಡೆಯು ನಲುಮೆಯ ಹಾವ ನಾಣನ್ನೆ ಹಂಗಿಸಿತು.

ಕಾಲಪ್ರವಾಹದಲಿ ಮುಂಬರಿದು ಬಹ ನಾವೆ
ಮಾಲಬಾರದು, ಮುಗುಚಿದರೆ ಮುಳುಗದಿರುವವೇ?
ಮಧುರಗಾನದ ಮೇಳಕೊದಗಿ ವಿಷಮ ಶ್ರುತಿಯು
ಅದುಮಬಾರದು, ಮೀಟಿದರೆ ನಾದ ಕಳೆಗೆಟ್ಟು
ಒದರುವುದು; ತಿಳಿದ ನೀರಾಸರೆಯು ತಳಕಿತ್ತು
ಕೆದಕಬಾರದು; ಉಂಡ ಕಹಿಮದ್ದ ನೆನಪಿಟ್ಟು
ಮುದುಡಬಾರದು ಸವಿಯು ಸಾನ್ನಿಧ್ಯದಲಿ ಕುಳಿತು;
ಹೋದ ರಸನಿಮಿಷಗಳ ನೆನೆದು ಕಣ್ಣೀರಿಟ್ಟು,
ಸಾಧನೆಯು ಬಿಟ್ಟು, ಸಮರಸವ ಬಳುವಳಿ ಕೊಟ್ಟು
ಕೂಗಬಾರದು; — ನೊಂದವರಿಗಿದೇ ಸಂದೇಶ-
ವೆನಲು ಮೂಡಿತ್ತವಳ ಮೆಲ್ನುಡಿಯೊಳಾವೇಶ.

ನಿರಿಗನೆಲೆಗಳ ನಡುವೆ ಮರ್ಮರದ ಮರೆಯಲ್ಲಿ
ಗೊರವಗಳು ಜೋಡಾಗಿ ಜೊಂಪಿಸುತ್ತಿರುವಲ್ಲಿ
ತರಳೆಯಾಕೆಯ ಕಣ್ಣ ಕದಿರು ಸೋಂಕಿತೊ ಏನೊ!
ಪಟಪಟನೆ ರೆಕ್ಕೆ ಬಡಿದೆದ್ದು ಹಾರಿದ ನೋಟ
ತನ್ನನಣಕಿಸುವಂತೆ ತೋರಿತಾದರು— ಅಕಟ!
ತಾರದಾದಳು ಮನಕೆ. ಗೆಲವಿನೆಸಳಿನ ಗೊಂಡೆ-
ಘುಮ್ಮ್ರಸವ ಹೂಸೆಂಡೆಯಾಗಿ ಕೈಯನು ಬೀಸಿ,
ಗಾಳಿದೆರೆಗಳನೀಸಿ ಬರುವಂತೆ ಪರ್ಣಕುಟಿ
ದಾರಿ ಹಿಡಿದೈತರಲು ಕೊಡವನಪ್ಪಿದ ಕೈಯ
ಹಿಡುವಳಿಯು ಸಂದೊತ್ತಿ-ಅಯ್ಯೊ! ಮುತ್ತೈದೆಯಾ
ಎಡಗೈಯ ಕರಿಬಳೆಯು ಒಡೆದುರುಳಿತೇಕೆ? ಹಾ!!

× × × × × × ×

ಕುಣಿವ ಸುಗ್ಗಿಗೆ ಮಣಿವ ಮಾಮರಕೆ ಕಮ್ಮಲರು
ಮಕುಟವಾಗಿದೆ; ಮಧುರ ಮಧುಮಾಸ ಲಾಸ್ಯಗಳು
ಪ್ರಕಟವಾಗಿವೆ; ಅನುಭವಕ್ಕೆ ನೆನಹಿನ ಸವಿಯು

ನಿಕಟವಾಗಿದೆ; ತಿರೆಯ ಬಾಳ್ಕಿಯಲಿ ಯೌವನವು
ನೆರೆಯುತಿದೆ; ಹೊನಲೊಡೆದು ಸರಸಗಾನದ ಬಿಂದು
ಹರಿಯುತಿದೆ; ಪಿಕದ ಸುಹೃದ್ಗೊರಳ ಗೀತದ ಸ್ವಾದು-
ಪ್ರೇಮ ವಿಜಯದ ಡಂಗುರವ ಬಡಿದು ಸಾರುತಿರೆ,
ವೈರಾಗ್ಯ ವಾರಿಧಿಗೆ ವಲಿಗಳುಕ್ಕೇರುತಿವೆ.
ಚಿತೆಯೊಳಗು ನಲುಮೆ ಚಿಗುರೊಡೆವ ಕಾಲದ ಮಹಿಮೆ!
ಅತ್ರಿ ಭೃಗು ದೂರ್ವಾಸ ಮತ್ತೆ ವಿಶ್ವಾಮಿತ್ರ-
ರೆತ್ತ ನೃಪವರ ಪಾಂಡುವೆತ್ತ? ದೀಪಕೆ - ಕೀಟ!
ಸೃಷ್ಟಿಯೇ ಸಿಡಿದೆದ್ದು ವಿರಹಿಗಳ ಕೊಲುವಂದು
ಪಥ್ಯವಲ್ಲವೆ ನಲ್ಮೆದುಟಿಯ ಮುತ್ತಿನ ಮರ್ದು?

ಪರ್ಣಶಾಲೆಯ ಮುಂದಿನಲಿ ಬಂದಳಾ ಮಾದ್ರಿ
ಮೋಹರಾಜ್ಯದ ರಾಣಿ, ಪಾಂಡುರಾಜನ ಗರತಿ!
ತನ್ನರಸನನು ಕಾಣಲೊಡನೆ ನಡೆಗೆ ನಿಧಾನ
ಬಿಂಕಗೂಡಿತು. ಚಿಗರೆ ನೋಟ ಚೆಲ್ಲಾಡಿತ್ತು.
ಭಾವದುಬ್ಬರಕೆದೆಯು ಬಡಿತವಿಮ್ಮಡಿಸಿತ್ತು.
ನಟ್ಟ ನೋಟದೊಳರಸ ಹಸಿದಂತೆ ದಿಟ್ಟಿಸುವ
ಗುಟ್ಟನೊಡಪಿಗೆ ಬೆದರಿ ದೇಹ ತತ್ತರಿಸಿತ್ತು.
ತೇಲುಗಣ್ಣಿನ ಗೊಂಬೆ ಸುರೆಯ ಸುರಿವಂತಿತ್ತು.
"ಎಂದಿನಂತಲ್ಲವದು - ಆ ನೋಟ ನಲ್ಲನದು,
ರಸರಸದ ಬಾವಿಯದೊ ಕಣ್ಣೊಳಗೆ ತೀವಿಹುದೊ?
ಮಾದಕವಲಾ ತುಂಬುದಿಟ್ಟಿ ಮನ್ಮಥನಂಬು!"
ಎನ್ನುತಿರುವಳು ಮಾದ್ರಿ ಮನದೊಳಗೆ. ಪಾಂಡುವಿಗೆ-
ತನ್ನ ಬರಿದಾದ ಬಾಳಿನ ಬರಡು ಬೋಗುಣಿಗೆ
ಅಮೃತರಸವೆರೆಯೆ ಬಹ ಮೋಹಿನಿಯೊ- ಮಾದ್ರಿಯೋ?
ಮಮದೇಹದೊಡಕು ವೀಣೆಗೆ ಸುತಂತ್ರಿಯ ಬಿಗಿದು
ಕ್ರಮಗೊಳಿಸೆ ಬಹ ಸರಸ್ವತಿಯೊ ಮೇಣೇಂ ಸತಿಯೊ?

ರತಿರಾಗ ಪುಟಿದೆದ್ದ ಪ್ರಗಿಯೊ-ಅರ್ಧಾಂಗಿಯೋ?
ಮಸೆದ ಮನ್ಮಥನ ಶರ ಮೊಲ್ಲೆಯೋ-ನಲ್ಲೆಯೋ?
ಎಂಬ ಸಂದೆಯ ಮೂಡಿತೋ-ವಿಧಿಯೆ ಕಾಡಿತೋ?

ಹೆಡತಲೆಯ ಹಿಂದೆ ಬುಸುಗುಟ್ಟಿ ಹೊಂಚುತಲಿರುವ
ಶಾಪ-ಸರ್ಪದ ಬಾಲ ಮೆಟ್ಟಿದನೊ! ಎಂಬಂತೆ
ತಟ್ಟನೆದ್ದನು; ನಾಲ್ಕು ಹಜ್ಜೆಯನು ಮುಂದಿಟ್ಟು,
ತೆರೆದ ಕೈಯೇ ಬೇಟದೂರಿಗೊಯ್ವ ಕವಾಟ-
ವಾಗಿರಲು, ಕಣ್ಣ ಯಾಚನೆ ವಿರಹ ಮೋಚನೆಯ
ವೈಜಯಂತಿಯ ವಿಜಯ ವರ್ಣವೆನೆ ಕೆಚ್ಚನೆಯ
ಕಾರುತಿರೆ, ಪ್ರಣಯ ರಾಜ್ಯಾಳಿಕೆಯ ಯೋಜನೆಯ
ಸಾರುತಿರೆ ಬಡಿದು ಡಂಗುರವೆದೆಯ ಬಾಜನೆಯು,
ಸುರತ ಸಿಂಹಾಸನಾರೋಹಣಕೆ ತನ್ನಾಕೆ
ರಾಣಿ ರತಿ-ರಸಮೌನ ಕಾವ್ಯ ಭಾಷೆಯ ವಾಣಿ-
ಕಲ್ಯಾಣಿ ಸಾಧ್ವಿಯನು ಕರೆದನಾ ಮಾದ್ರಿಯನು,
ನಾಡಿ ನಾಡಿಯ ನಲುಮೆಯಲಿ ಬಾಯ ಮುಕ್ಕುಳಿಸಿ
ಹಾಡಿದನೊ ಎನುವಂತೆ "ಬಾರೆ ಚಿನ್ನಾ"—ಎಂದು.

ಅಯ್ಯೊ! ಗತಿಯೇನೆಂದು ಬೆದರಿದಳು, ಬೆವರಿದಳು.
ತನ್ನ ಮರುಳಾಟದರಿವಾಗಿ ಮನ ಮರುಗಿದಳು.
ಶಾಪತಪ್ತನ—ಪತಿಯ—ಬಗೆಯಾಳದಲಿ, ತನ್ನ
ರೂಪ ಪ್ರದರ್ಶನದ ಕಲ್ಲೆಸೆದು, ಕಳವಳದ
ವ್ಯಾಪನ ತರಂಗ ಕಲ್ಲೋಲವನ್ನೆಬ್ಬಿಸಿದ
ಪಾಪಕಾರಿನ್ನು ಹೋಣೆ? ಕುಂತಿಯಾದರೊ ಜಾಣೆ!
ಇದ್ದಿದ್ದರೇ.... ಎಂದು ಎಣಿಸಿದಳು; ಇಣುಕಿದಳು.

"ಏನನರಸುವೆ? ಹಿರಿಯ ರಾಣಿಯನೊ? ಹೆದರದಿರು,
ತಾನೀಗಲೇ ಮಕ್ಕಳೊಡನೆ ಅರೆಗಾವುದದ
ಋಷ್ಯಾಶ್ರಮಕ್ಕೈದಿದಳು, ಬೇರೆ ಭಯ ಬೇಡ!"—

ಎಂದಭಯುವೀಯುತಿರೆ, ಮಾದ್ರಿ ಕಣ್ಣೀರ್ಸುರಿದು
ಕೈಮುಗಿದು, ದೂರ ದೂರಕೆ ದೂರ-ಸರಿಸರಿದು,
"ಪ್ರಾಣದೇವಾ! ಬೇಡ, ಬೇಡ ಆಗದು ನೋಡ!
ಇನಿತು ಕಾಲವು ಬಾಯ ಬಿಗಿವಿಡಿದ ಭಾವನೆಯ,
ನೆಲೆಗೆ ಬರುತಿಹ ಮನವ, ಹಾದಿ ತಪ್ಪಿಸಬೇಡ.
ನಿನ್ನ ಸುಖವನು ಧಿಕ್ಕರಿಸುವ ದಿಟ್ಟಿಯು ಎಂದು
ಭಾವಿಸದಿರೆನ್ನೊಡೆಯ!"--ಎನ್ನುವಳು ಹಿಂಜರಿದು.

ಆಗದೆನ್ನುವ, ಬೇಡ, ಬೇಡ,- ಎನ್ನುವ ಮಾತು
ಪ್ರಣಯಗಾನದೊಲಾಗೆ, ಕರ್ಣ ರಸದಿಂದಿಡಿದು
ಕೇಳದಾಯಿತು; ಲೋಕ ಕಾಣದಾಯಿತು; ಮಿಕ್ಕ
ಕರಣಂಗಳಳವೆಲ್ಲ ಕಾಯದಲಿ ವ್ಯಾಪಿಸಿತು;
ಸ್ಪರ್ಶವೇ ಸರ್ವೇಂದ್ರಿಯಂಗಳಾದವು; ಮೊದಲ-
ಗಿತ್ತಿಯಂದದಿ ಕಂಡಳಾಕೆ; ಧಾವಿಸಿ ತಡೆದು
ಕೈವಿಡಿಯೆ, ಕಾಲ್ವಿಡಿದು ಅತ್ತು ಬೇಡಿದಳೆಂದು.

ಮೃದುಕರಸ್ಪರ್ಶದಲಿ ರೋಮಹರ್ಷಣವಾಯ್ತು;
ನರನರದ ಕಣಕಣದಿ ರುಚಿರ ನರ್ತನವಾಯ್ತು;
ಆಗದೆನ್ನುವ ಅವಳ ನಲ್ನುಡಿಯೆ 'ಕಿವಿಗುಟ್ಟು'
ನಾಣೆನಿಸೆ, ಮೊದಲ ಶೋಭನ ಸಮಾರಂಭದಲಿ
ಪ್ರಥಮ ಪರಿಚಯಗೊಳುವ ಅಮೃತಾವಕಾಶದಲಿ,
ಸೆಜ್ಜೆವನೆಯಲಿ ತನಗೆ ಒದಗಿದನುಭವವೀದು
ಗೆಜ್ಜೆಗಾಲಿಂ ಸ್ಮೃತಿಯರಂಗದಲಿ ಕುಣಿದತ್ತು.

"ನಿನ್ನ ಸಂಸರ್ಗದೀ ನಿಮಿಷ-ಪೂರ್ಣಾಯುಷ್ಯ;
ಎನ್ನೆದೆಯ ಸುಡುವಾಸೆಗಳನು ಗೆಲುವಾಘೋಷ!
ಜೀವ-ಭಾಜನಕೆದ್ದ ಕೊಳೆಕಿಲುಬು ನೈರಾಶ್ಯ
ಕಿಲ್ಬಿಷವ ತೊಳೆಯಲೀ ಪ್ರೇಮಗಂಗಾಸ್ನಾನ!
ಆಗದೆನ್ನದಿರೆನ್ನ ರನ್ನೆ, ಮೋಹದ ಚೆನ್ನೆ,

ಬೇಡವೆನ್ನದಿರೆನ್ನ ಮನದನ್ನೆ, ಕೂಟವನೆ
ಕೂಡದೆನ್ನದಿರೆನ್ನ ನಿತ್ಯನೂತನೆ—ಶಾನೆ!
ಜನುಮದೀ ಜವ್ವನವೆ ಬೆಳಗಿ ಪಾವನವಾಗೆ
ನೇಹವನ್ನೆರೆಯೆ! ಓ, ಎನ್ನಿನಿಯೆ, ಕೈಮುಗಿವೆ"—
ಎನುವ ದೀನಾರ್ತಯಾಚನೆಯೊಡನೆ ಕಣ್ಣೀರ
ಹನಿಯುದುರೆ, ಕಲ್ಲುಗಳೆ ಕರಗಿ ನೀರಾಗವೇ?
ನಲ್ಲನಾಡಿದ ಮಾತು ಶಲ್ಯದಂತಿರಿಯದೇ?
ಕೊನೆಗಾಣದಾ ಧರ್ಮಸಂಕಟಕೆ ತುತ್ತಾಗಿ
ಅಲ್ಲಾಡದಿರೆ ಮಾದ್ರಿಯೊಲ್ಲೆನೆನದಿರೆ, ನೃಪತಿ
ಭರದೆ ಬಾಚಿದನೆರಡು ಕರಗಳಿಂ ಸೆಳೆದಪ್ಪಿ;
ತಬ್ಬಿ ತಳ್ಕಿಸಿ ಬಿಡದೆ ಮರಮರಳಿ ಮುತ್ತಿಟ್ಟು,
ಎತ್ತಿ ಎಲೆಮನೆಯೊಳಗೆ ಒಯ್ದನುಂತೊತ್ತಟ್ಟು.



— ೩ —

ಜೀವಕೋಟಿಗಳ ಜೀವನ ಸಾರವನು ಕುಡಿದ
ಸಾವಿಗೂ ಹೆಣ್ಣ ಕಣ್ಣೀರ ಗಂಗಾಸ್ನಾನ
ಒದಗಿ, ಪುಣ್ಯ ಶರೀರನೆನಿಸಿಪನೇನೋ ಮಾರ!
ಅಲ್ಲದಿರೆ-ನಲುಮೆಯೆನೆ ಕಾಳೋರಗನ ನಂಜೆ?
ಬಾಳಿನುದಯಕ್ಕೊಡನೆ ಬರಬಾರದೇ ಸಂಜೆ?
ಅಂತಾಗಲೀ ಪ್ರಕೃತಿಯಾಗಲಾರಳೆ ಬಂಜೆ?
ಪ್ರೇಮವೇ ದೈವವೆನ್ನುವುದು ಸುಳ್ಳಿನ ಕಂತೆ!
ದೈವವನ್ನೇ ಮೆಟ್ಟಿ ತುಳಿವ ಶಾಪವದುಂಟೆ?
ಯಾವ ಪುಣ್ಯವೊ ಏನು ಪಾಪವೋ ಕರ್ಮವೋ
ಜೀವಿಗಳ ಜನ್ಮದಲಿ ಕುಣಿಸಿ ಮಣಿಸುವುದಂತೆ!
ಆಹ ದೈವವೆ ಹೆಚ್ಚೆ?  ಅಲ್ಲ – ಕರ್ಮವೆ ಹೆಚ್ಚೆ?
ದೈವ ಕರ್ಮಗಳೊಂದೆ ಎನುವುದಾದರೆ ಮತ್ತೆ
ಸಾಧನೆಯ ಗತಿಯೇನು?  ಆಗುವುದು ಆದಂತೆ.
ಒಮ್ಮೆ ದೈವದ ಮೈಯು, ಒಮ್ಮೆ ಕರ್ಮದ ಕೈಯು,
ಮೇಲೆಂದು ತೋರುವುದು, ಪಾಂಡುವಿನೊಳಾದುದೇಂ?,
ಕರ್ಮಕೊದವಿತು ಶಾಪ, ಶಾಪವೇ ವಿಧಿಯಾಯ್ತು;
ವಿಧಿಯ ಮೀರುವ ಕರ್ಮವಂತೆ ಫಲಿಸದೆ ಹೋಯ್ತು.
ಕೀಟಕ್ಕೆ ದೀಪವೇ ಹಣ್ಣೆಂದು ತೋರುವುದು.
ರೋಗಿಗಾಗದ ವಸ್ತು ಪಥ್ಯವೆಂದೆನಿಸುವುದು.

ಕಾಮನೆಯ ಕೂರಸಿಯ ಧಾರೆಯನ್ನೊರೆಯುರ್ಚಿ
ಕುತ್ತಿಕೊಂಡನೊ?  ವಲ್ಲಭೆಯ ಮುತ್ತಕೊಂಡನೋ?
ಹಿಳಿದ ರಸದಾಳಿ ಕಬ್ಬಿನ ಬೆಂಡನೆಸೆದಂತೆ,
ಸಿಡಿಲಿಂಗೆ ಸೀಳಿ ಮಲಗಿದ ಬಾಳೆಗಿಡುವಂತೆ,
ಚರೆನಾಟ ನಿಶ್ಚೇಷ್ಟವಾದ ಪಾರಿವದಂತೆ,
ಶರಘಾತದಿಂದೆಳೆಯ ಹರಿಣ ಕೆಡೆದಿರುವಂತೆ

ನಸುದೆರೆದ ನಲ್ದುಟಿಯು ಮುದ್ರೆ ಮುತ್ತಿನ ಸವಿಯ
ರಸವೋರುವಂದ, ಅರೆಮುಗಿದ ಕಣ್ಣುಗಳಿಂದ,
ದರಹಾಸಗೂಡಿರುವ ವದನ ಜೊನ್ನದ ಸದನ
ಸರಸ ಸಮರಸ ನಿಮಿಷವೇ ಸಗ್ಗವೆನುವಂದ,
ಬಿರಿದ ಚೆಂದುಟಿಯೆಡೆಯು ಕುಂದಕುಟ್ಮಲ ರದನ,
ಸಾನಂದ ಸಂತೃಪ್ತಿಗಳನು ತೋರಣಗಟ್ಟಿ –
ದಂತೆಸೆವ ಪುಳಕ ಪುರ್ವಿನ ಮಿಡುಕ, ಅಕಟಕಟ!
ಬೆಳದಿಂಗಳಿನ ಸಾಲಭಂಜಿಕೆಯೊ? ನಿಶ್ಚೇಷ್ಟ –
ವಾದ ನೃಪತಿಯು ಧವಳ ಕಾಯವೋ? – ಕೆಡೆದಿತ್ತು.

ಮಾದ್ರಿ ತಲೆದೆಸೆಯಲ್ಲಿ ಕುಳಿತು ಗೋಳಿಡುತಿಹಳು.
"ವಿಷಕನ್ಯೆಯನು ಸೋಂಕಿದಂತಾಯ್ತೆ ಓ ನಲ್ಲ?
ನಲ್ಮೆಗೆಲ್ಲಿಯು ಶಾಪವೆಂದು ಬಂದೆನು ಓಪ!
ಎನ್ನ ತೋಳಿನ ಬಂದಿ ನಿನ್ನುಸಿರನೇ ಹಿಂಡಿ
ಬಿಟ್ಟಿತೇ? ಬದುಕು ಕೊನೆಮುಟ್ಟಿತೇ ಹರಣ ಬಡಿ –
ಪಟ್ಟಿತೇ? ಮೃತ್ಯು ಗುರಿತೊಟ್ಟಿತೇ? ಭವಬಾಸೆ
ಕಟ್ಟಿತೇ ಬೆನ್ನಲ್ಲಿ? ಬಯಕೆ ತೀರುವ ಮುನ್ನ
ಕುಟ್ಟಿತೇ ಹುಡಿಹುಡಿಯ ಅಯ್ಯೊ ಜೀವದರನ್ನ?
ಎನ್ನ ತುಟಿಯಿಂ ಜಾರಿ ನಿನ್ನಸುವನೇ ಹೀರಿ
ಓಡಿತೇ ಸಾವು, ಬಿಟ್ಟೋಡಿತೇಕೋ ಎನ್ನ?"
ಎಂದು ಹಲಬಗೆಯಾಗಿ ಹಲುಬಿ ಹಣೆಹಣೆ ಬಡಿದು,
ಹಮ್ಮೈಸುತೆದ್ದು ಹೊರಹೊರಳಿ ಹೊಟ್ಟೆಯ ಹೊಸೆದು,
ಗೋಳಿಡುವ ಆಕ್ರಂದವಲೆಯಾಗಿ ಗಾಳಿಯಲಿ
ಹರಡಿ ಮಾರ್ದನಿಯೊಡೆದು ಕಾಡನ್ನೆ ತುಂಬಿತ್ತು.

ಸನಿಹ-ದೂರದ ಮುನಿಗಳೆಲ್ಲ ವಿಸ್ಮಯಗೊಂಡು
ಅಳಲ ದೆಸೆಯಿಂ ಕೊಂಡು ನೆರೆದರಲ್ಲಿಗೆ ಹಿಂಡು.
"ಅಳಬೇಡ ಮಗಳೆ, ಜನ್ಮಗೆ ಸಾವು ನಿಶ್ಚಿತವು;

ನಿಯಮವದಕೊಂದು ನೆವವಾಗುವುದು ಕಾರಣವು;
ಅಂತೆಯೇ ನೀನಾದೆ, ಎಂತಿದ್ದರೂ ನೃಪತಿ
ಈಬಗೆಯೊಳೇ ಗತಿಸಬೇಕಿತ್ತು; ನೀಂ ಸುಕೃತಿ!
ಕೊನೆಗಾಲಕೂ ತನ್ನ ದೊರೆಯ ಸುಖಿಸಿದ ಗರತಿ,
ಭಾಗ್ಯವಂತಳೆ ತಾಯಿ?" – ಎಂದು ಸಂತೈಸಿದರು.

ಅನಿತರೊಳು ಕುಂತಿ ಸುದ್ದಿಯ ಕೇಳಿ ಬಿದ್ದೆದ್ದು,
ಓಡುತೋಡುತ ಬಂದು, ನಡೆದುದನು ಮನದಂದು,
ಬಾಯ್ಗೊಟ್ಟು ಭೋರೆಂದು ಅತ್ತಳಲ್ಲಿಯೆ ಕುಳಿತು.
ಕುಂತಿಯನು ಕಂಡೊಡನೆ ಮಾದ್ರಿ ತಾನೆದ್ದೋಡಿ
ಅಕ್ಕನನು ಬಿಗಿದಪ್ಪಿ ಮರಳಿ ಗೋಳಿಟ್ಟಿರುಳೆ,
ಮಕ್ಕಳೈವರು ಪಿತನ ಕರೆಕರೆದು ಕೂಗುತಿರೆ,
ಸವತಿತನದಾ ಕಿಚ್ಚು ಭುಗಿಲೆಂದು ಹೊತ್ತಿತೆನೆ
ಕುಂತಿ ತಂಗಿಯನಿಂತು ಹಲುಬಿ – ಹೀನೈಸಿದಳು.

"ಎಲೆ ಹೆಣ್ಣೆ, ಶಾಪಸ್ಥನಾದೆನ್ನ ಪತಿಯನ್ನು
ಕಾಡಿ ಕೂಡಲು ಎನಿತು ಕಾಲದಿಂ ಕಾದಿದ್ದೆ?
ಎನ್ನೈದೆತನವ ನಿನ್ನೆದೆಯ ಮೇಲಕ್ಕೊಡೆದೆ!
ಎನಗೆನ್ನ ಕಂದಮ್ಮಗಳಿಗಾರು ಗತಿ, ತಂದೆ?"
ಎಂದು ಮಾತಿನ ಮೊನೆಯ ಮಸೆದಂಬಿನಿಂ ತಿವಿಯೆ
ಮಾದ್ರಿ ಕಣ್ಣೀರ್ಸುರಿದು ಬಿಕ್ಕಳಿಸಿ ಕೈಜೋಡಿ –
"ಓ ಅಕ್ಕ, ನಡೆದುದರ ಅರಿವಿಲ್ಲದೇ ಬರಿದೆ
ನಿಷ್ಠುರದ ಮಾತಿನಿಂದಿರಿಯದಿರು ಮಾತಾಯೆ!
ಇಲ್ಲಿ ನೀನೇನ ಹೇಳಿದರು ದಕ್ಕುವುದೆಂದು
ಸಲ್ಲದಪವಾದದಿಂ ದೂಷಿಸದಿರೆನ್ನವ್ವ!
ನೀ ವಿಧವೆ ನಿಜವೆನ್ನ ತಾಳಿ ಕಳಚಿಲ್ಲವೇ!
ಎನ್ನ ಕಿರುಗೂಸುಗಳು ತಬ್ಬಲಿಗಳಲ್ಲವೇ?
ಬೇಕೆಂದೆ ಭಾಗ್ಯರತ್ನವನೆಸೆಯಬಲ್ಲೆವೇ?

ಹೆತ್ತವ್ವೆಗೆಣೆಯೈಸೆ ನೀನೆನ್ನ ಹಿರಿಯಕ್ಕ,
ನಿನ್ನ ಸನಿಹದೊಳಿದ್ದು ಸೇವೆಗೈಯುವ ಭಾಗ್ಯ
ಕೊನೆಯಾಯ್ತು; ಏಕಾಂಗಿಯಾಗಿಹೆನು, ಪತಿಪಾದ
ಗತಿಯೆ ಸದ್ಗತಿಯೆಂದು ಚಿತೆಯನೇರುವೆನೆಂದು
ಸತಿಹೋಗುವೆನು" – ಎಂದು ಕಾಲ ಹಿಡಿದುರುಳಿದಳು.

× × × ×

ಮನವ ಮಥಿಸುವ ಮಹಿಮ ಮರೆಗೆ ಸಾರುವೆಯೇಕೆ?
ನನೆಗೋಲ ಕಾಣಿಕೆಯೊಳೆರಗು ಸತಿಯಡಿಗಳಿಗೆ!
ಮಾನ ದಾನವ ಬೇಡಿ ಓಡದಿರೆಲೋ ಹೇಡಿ
ವಿಧಿಯೆ, ಮಸಿ ಲೆಕ್ಕಣಿಕೆಯನು ಪಿಡಿದು ಸಜ್ಜಾಗು,
ಬದಲು ಬರೆಯಿಪಳೀಗ ನಿನ್ನ ಲಿಖಿತವ ತಿದ್ದಿ!
ಮಾಂಗಲ್ಯ ರತ್ನವನು ಕಸಿಯಲೆಳಸಿದ ಮೃತ್ಯು,
ಸತಿಯಾಜ್ಞೆಗೇ ಮಣಿದು ಮತ್ತೊಮ್ಮೆ ಮೈದೋರು,
ಸಂಗಡಿಸಿತೀ ತೊತ್ತುಗೆಲಸ ಕೊರಳಿಗೆ ಬಿತ್ತು!
ಸೃಷ್ಟಿಯ ಚರಾಚರದ ಸರ್ವಾಂತರಾಳದಲಿ
ಸರಸಾಮೃತದ ರಕ್ತವೆರೆವ ವೈದ್ಯ ವಸಂತ,
ನೋಡ – ಪ್ರೇಮದ ಖಂಡದೊಳಗೆ ಬೆಂಕಿಯ ಕೆಂಡ
ಕತ್ತುತಿದೆ, ಬೆಜ್ಜತನದೀ ಜಂಬ ಬಿಡು,. ಹುಂಬ!
ತಪದ ಸಂತಾಪದಗ್ನಿಯ ಸಹಿಸದಲೆ ರೋಸಿ
ಹೆಣ್ಣ ನಲ್ದೋಳ ಶೈತ್ಯೋಪಚಾರವ ಬಯಸಿ
ಪ್ರಣಯ ವಾರ್ಧಿಯನೀಸಿದಂಥ ಗಿರಿಜಾಕಾಂತ,
ನಿನ್ನ ಧೃತಿಯೆಲ್ಲಿ ಮಾದ್ರಿಯದೆಲ್ಲಿ? ಮೈಯಾಂತ
ಬೆಟವನೆ – ಕಾಟವೆನೆ ಬಗೆವ, ಕಿಚ್ಚಿಗೆ ನೆಗೆವ
ನೋಟ ನೋಡಲು ನಾಚುತಿರುವೆಯೋ – ಮುಖಮುಚ್ಚು!
ಸೌಂದರ್ಯಸಾರ ಸುಖ ಸಂಪತ್ತಿನಾವಾರ
ನಾಕವೇ? ನಾಕೇಶನಿನ್ನು ಸಾವಿರಕಣ್ಣು

ತೆರೆದು ನೋಡೀ ಸತಿಯ ಧೃತಿಮತಿಯ ಸೌಂದರ್ಯ,
ದಿವ್ಯತೆಯ ಭವ್ಯತೆಯ, ಚಿರಕಾಲ ನವ್ಯತೆಯ!
ಶ್ರೀಗಂಧ ಮೊದಲಾದ ಕಾಷ್ಠಗಳನೊಟ್ಟಿಹರು.
ಬಳಿಯೊಳೇ ನಿಂದಿರ್ದ ಹದಿಬದೆಯ ಮೊಗದಲ್ಲಿ
ಚಲ-ವಿಷಾದದ ರೇಖೆಯಿಲ್ಲ, ನಿರ್ಭರವಿತ್ತು.
ಭಯ-ಉನ್ಮ್ಮಳದ ಛಾಯೆಯಿಲ್ಲ, ನೆಮ್ಮದಿಯಿತ್ತು.
ಮಿಂದು ಮಗುಳೊಮ್ಮೆ ಶುಚಿಯಾಗಿ ನಾರ್ಮಡಿಯುಟ್ಟು
ಚಕ್ರವರ್ತಿಗೆ ತುಲಸಿ ನವಮಾಲೆಯನು ತೊಡಿಸಿ,
ಕೈಮುಗಿದು ಬಲವಂದು, ಪಾದಕ್ಕೆ ಪೊಡಮಟ್ಟು,
ಸರ್ವಾಂಗ ಗಂಧ-ಚಂದನದ ಲೆಪ್ಪವ ಪೂಸಿ,
ಕತ್ತುರಿಯ ಬೊಟ್ಟಿಟ್ಟು, ತಾನು ಕುಂಕುಮ ತೊಟ್ಟು,
ಸಿಂಗರಿಸುತವಳು ನೀರಾಜನವ ಬೆಳಗಿದಳು.

ಚಿತೆಯ ಮೇಲಕ್ಕೆ ಹೊಸಕುಶೆಯ ಹಾಸನು ಹಾಸಿ,
ತಳಿರಲರುಗಳ ಚೆಲ್ಲಿ ಸುಖಶಯ್ಯೆಯೆನೆ ಗೈದು;
ತಲೆಯೊತ್ತಿಗೆಂದೆಳೆಯ ಸಿರಿಸದಿಂಬನು ಸಮೆದು;
ಕೆಳಗಿಳಿದು ಮುನಿವಟುಗಳೊಡನೆ ತನ್ನಿನಿಯನನೆ
ಎತ್ತಿ ಒಯ್ದಿರಿಸಿ, ಚಿತೆಹತ್ತಿ ತಾನಣಿಗೊಳಿಸಿ,
ಮತ್ತೊಮ್ಮೆ ಕೆಳಗಿಳಿದು ಅಲರುಗಳ ಸಿಂಪಡಿಸಿ,
ಇಂತು ತನ್ನೆರೆಯಂಗೆ ಅಂತೆ ತನಗೂ ಕೊನೆಯ
ಅಂತ್ಯ ವಿಧಿಗಳ ತಾನೆ ಗೈದು ಪೂರೈಸಿದಳು.

ಕುಂತಿಯೋ – ನಿಬ್ಬೆರಗುಗೊಂಡು, ದಿಙ್ಮೂಢತೆಯ
ಮಂತ್ರಿಸುತ್ತಿರುವಂತೆ, ಕಣ್ಮಿಟ್ಟು ಮಿಕಮಿಕನೆ
ನಿಂತು ನೋಡುತ್ತಿಹಳು. ಮಕ್ಕಳೈವರು ಭಯಾ –
ಕ್ರಾಂತರೋ ಭ್ರಾಂತರೋ? ಬಾಯ್ದೆರೆದು ನಿಂದಿಹರು.
ಮುನಿವಧುಗಳೆಲ್ಲ ಮಾದ್ರಿಯ ಧೃತಿಗೆ ಮೆಚ್ಚಿದರು.
ಈ ಬಾಳು ಗೋಳೆಂದು ಸುಯ್ಬಿಡುವ ಜೋಗಿಗೂ,

ಮುಪ್ಪೊತ್ತು ವಿಸಾಯುತಾರಾಧಿಪರ್ಚಕನಿಗೂ,
ಅಧಿಕಾರ ಮದಿರೆಯಿಂ ಮತ್ತೇರಿದಾತಂಗು
ಭೀತಿಯೊಂದೇ ಒಂದು; ಮರಣವಾರ್ತೆಗೆ ಬೆದರಿ
ಸಾವ ಮೊದಲೇ ಸತ್ತು ಹುಟ್ಟುತಿರುವರು; ಜವನ
ಕಾಲ ತುಳಿತವನಿಂತು ಓಲೈಸುವವರಿಹರೆ?

ಮಾದ್ರಿ ಮತ್ತೊಮ್ಮೆ ಕುಂತಿಯು ಕಾಲಿಗೆರಗಿದಳು.
"ಅಕ್ಕ ನಾನಾಗಿಯೇ ಪತಿಯು ಹತಿಸಿದ ದುಷ್ಟೆ –
ಸೊಕ್ಕಿನಲಿ ಮರುಳು ಮಾಡಿದ ದಿಟ್ಟೆ – ಎನ್ನದೆಯೆ
ಅಕ್ಕರೆಯಿನೆನ್ನ ನೀ ಹರಸಿ ಬೀಳ್ಕೊಡು, ತಾಯೆ!
ನಿನ್ನ ವರಗಳಲೊಂದ ಕರುಣೆಯಿಂದೆನಗಿತ್ತೆ;
ಬಂಜೆ ಬಸಿರಲ್ಲುಭಯ ಮಕ್ಕಳನು ದಯೆಗೈದೆ;
ನಿನ್ನ ಮಕ್ಕಳ ಹೊರುವ ಪುಣ್ಯವನು ನಾ ಪಡೆದೆ!
ತನುಜರೆನಗಿವರಿಂತು ನಿಜ ನಿಮಿತ್ತಕೆ ಮಾತ್ರ;
ನಿನ್ನವರೆ ಸಹಜದಲಿ, ತಾಯೆ ಕಾಪಾಡಿಕೊಳ್!
ಹೊತ್ತು ಹೆತ್ತುದಕಿನಿತು ಬೇಡಿಕೊಳ್ಳುವೆನಿಂದು,
ಐವರೂ ನಿನ್ನವರು – ನಿನ್ನ ಕರುಳಿನ ತುಂಡು;
ಆವ ಕಾಲಕು ಎನ್ನ ನೆನೆಯುವಂತೆಸಗದಿರು,
ತಬ್ಬಲಿಗಳಾದವರ ತಾಯಾಗಿ ತಕ್ಕೈಸು."
ಎನುತ ಮಕ್ಕಳನೈವರನು ಕರೆದು ಬಿಗಿದಪ್ಪಿ
ಬೇರೆ ಬೇರಾಗಿ ತಬ್ಬಿದಳು! ಮುದ್ದಿಡುವಾಗ
ತಡೆವಿಡಿದ ಶೋಕಪ್ರವಾಹ ತಡಿವೊಡೆದಂತೆ
ಕಣ್ದುಂಬಿ ಹೊನಲಾಗಿ ಹರಿಯುತಿರೆ, ಯಮಳರನು
ತಕ್ಕೈಸೆ ತಾಯ್ತನವು ಪೊರೆಯೇರೆ, ಮೈಬೆವರೆ,
ರುದ್ಧ ಕಂಠದ ಸಿರಗಳೊಗೆಯೆ, ಮಾತನು ಬಿಗಿಯೆ,
ಕುವರರನೊಪ್ಪಿಸಿದಳೈದೆ – ಕುಂತಿಯ ಕೈಗೆ.

ನೋಡಲಾಗದ ನೋಟವಕಟಕಟ! ಎದೆಕರಗಿ

ಮುನಿವಧುಗಳೆಲ್ಲರೂ ಮಲಮಲನೆ ಮರುಗಿದರು.
ಏನು ತೋರಿತೊ! ಕುಂತಿಗೂ – ಅಳ್ಕರುಕ್ಕಿತೋ!
ಭೋರೆಂದು ಗೋಳಿಟ್ಟು ತಂಗಿಯನು ಬಾಚಿದಳು;
ತಬ್ಬಿದಳು; ತಲೆಯ ಮುಂಡಾಡಿ ಕೊಂಡಾಡಿದಳು.
"ಬಾ ತಂಗಿ, ಬಾ ಶಾನೆ, ಬಾರೆನ್ನ ಮರಿಯಾನೆ!
ಬಾರೆ ಪುಣ್ಯಶರೀರೆ, ಕರ್ಮನಿಶ್ಚಲೆ ಧೀರೆ!
ದೇವಿ, ಮಾನವಿಯಾದೆ – ನಿಶ್ರೇಯ ಧ್ರುವತಾರೆ.
ಸತಿಯಾಗು, ಮಾಪತಿವ್ರತೆಯಾಗು, ಶಶಿಕುಲದ
ದ್ಯುತಿಯಾಗು ಪುಣ್ಯ ಕೀರ್ತಿಕೆಯಾಗು, ಭವಭವದ
ಭಾಗ್ಯನಾಯಕಿಯೇ ವರಪ್ರದಾಯಕಿಯಾಗು.

ತಡೆಯಲಾರೆನು ನಿನ್ನ ಬೇಡವೆನಲಾರೆ ನಾ;
ವೈಧವ್ಯವಾಂತು, ಕೊರಡಾದ ಕಾಯುವ ಹೊತ್ತು,
ಸತ್ತು ಬಾಳುವ ಎನ್ನ ಜೀವಚ್ಛವಕ್ಕಿಂತು
ಕರ್ತವ್ಯ ಗುರುಭಾರವನು ಹೇರಿದೆಯೆ? — ತಾಯೆ!
ನಿನ್ನ ಸೈಪಿನ ಕವಚ ತಲೆಬೆನ್ನಕಾದಿರಲಿ,
ಎನ್ನಾರಯಿಕೆ ಕುವರರಿಗೆ ನೆವದೊಲಾಗಿರಲಿ,
ಧನ್ಯೆಯೇ ದಯೆಗೈಯೆ, ಐವರೂ ನಿನ್ನವರೆ;
ಎನ್ನ ಕಠಿನೋಕ್ತಿಯುಂ ಕ್ಷಮಿಸಲಾರೆಯ ಮಗಳೆ?
ಕುಂತಿ ಹಲುಬಿದಳಿಂತು ಹರಸಿ ಯಾಚಿಸಿ ನಿಂತು.

ಮಾದ್ರಿ ವಿಧಿಯಂತೆ ಮಕ್ಕಳ ಕೈಯ ಕೊಳ್ಳಿಯಲಿ
ಕಿಚ್ಚನೊಟ್ಟಿಸಿ ಚಿತೆಗೆ ಕೈಮುಗಿದು ಬಲವಂದು —
"ಸರ್ವರೂ ಹರಸಿ ಬೀಳ್ಕೊಡಿರೆನ್ನ" — ಎನುತೆಂದು
ಉರಿಗೊಳ್ಳುತಿಹ ಚಿತಾಗ್ನಿಯ ಪ್ರಾರ್ಥಿಸಿದಳಿಂತು.
"ಓ ಅಗ್ನಿದೇವ, ದಯದೋರಿ ಸ್ವೀಕರಿಸೆನ್ನ;
ನಿನ್ನ ಮುಖದಿಂ ದೇಹಯಜ್ಞ ಗೈಯುವೆನೀಗ.
ಬಸಿರ ದೋಹಳದಿಂದ ಅಶ್ವಿನಿ ಕುಮಾರರನು

ಕೂಡಿರ್ದನೊಮ್ಮೆ ವಿಧಿಯಂತೆ ಪತಿಯಾಜ್ಞೆಯಲಿ;
ಕಾಯ ಜನ್ಯವಿದಾದ ಕಲುಷವನು ಕಳೆದೆನ್ನ
ಜೀವಸಾರವ ಚಿತೆಯ ಕೋವೆಯಲಿ ಪುಟವಿಟ್ಟು,
ಯಾಗದಿಂ ಪರಿಶುದ್ಧ ಹವಿಯನೊಯ್ಯುವ ನೀನು
ಶುದ್ಧ ಹೊನ್ನನೆ ಪತಿಯ ಸಾನ್ನಿಧ್ಯಕರ್ಪಿಸೈ" —
ಎಂದೇರಿದಳು ಚಿತೆಗೆ.

— ಬೇಸಗೆಯ ಬೇಗೆಯಲಿ
ಯೋಷೆಯರು ತವಕದಿಂ ತಂಗೊಳವ ಹೊಗುವಂತೆ,
ಶೋಭನದ ಸತಿ ಸೊಗದ ಸೆಜ್ಜಾರ ಸೇರ್ವಂತೆ,
ಎಣೆವಕ್ಕಿಗಳು ತಮ್ಮ ದಿನದೂಟವನು ಮುಗಿಸಿ
ಇರ್ಕೆಯಲಿ ಸಮೆದ ಪಳ್ಕೆಯಲಿ ವಿರಮಿಸುವಂತೆ,
ಅರಳುದಾವರೆಯ ಮಧ್ಯದಿ ತನ್ನ ಕಾಂತನನು
ಕಂಡ ಚಕ್ರಾಂಗನಾವಧು ನಲಿದು ಬರುವಂತೆ,
ಮೊದಲ ಮಳೆಹನಿಗೆ – ಚಾದಗೆ ಬಯಸಿ ಪೋಪಂತೆ,
ಬಯಲಲ್ಲಿ ಹರಿವ ನದಿ ಸಂಗಮಕ್ಕೆಳೆವಂತೆ,
ಸತ್ಯವನು ಬಳಿವಿಡಿದು ಬೆಂಬಲಿಪ ಶಿವದಂತೆ,
'ಕರ್ತವ್ಯ ಕರ್ಮ'ವನ್ನೊಲಿದು ಬಹ ಫಲದಂತೆ;
ಸಂಮೋದ ಸಾನಂದ ಸಂತೃಪ್ತಿಯಲಿ ಮಾದ್ರಿ
ಸಸ್ಮಿತಾನನೆಯಾಗಿ ಸಜಲಾಕ್ಷಿತಾನಾಗಿ,
ಸಾಕಾರ ದೇವನಾಗಿಹ ಪತಿಯ ಸನಿಹದಲಿ
ಸಲುಗೆಯಲಿ ಸರಸ ಸಲ್ಲಾಪವಾಡುವ ತೆರದಿ,
ಶವದ ಶಿರವನ್ನೆತ್ತಿ ತೊಡೆಯನೇರಿಸಿಕೊಂಡು;
ಕೈಮುಗಿದು ಕಣ್ಮುಗಿದು, ಧನ್ಯತೆಯೊಳೇ ಬೆರೆದು,
ಪುಣ್ಯಭಾವವ ಮೆರೆದು, ಮೈಮರೆದು ಕುಳಿತಿರಲು, —
ಗೌರಾಂಗಿಯಾ ಧವಳಕೀರ್ತಿ ಸುಕೃತಿಗಳಿಂದ
ಅಗ್ನಿಯೇ ಬೆಳಗಿ ಧವಳಿಸಿದಂತೆ, ಕೆಂಚಳಿದ

ಬೊಂಬಾಳ ದೀವಿಗೆಯ ವಿಸ್ತಾರ ಬೆಳಗಿತ್ತು.
ಕರ್ಬೊಗೆಯ ನಡುವಲ್ಲಿ ಬಿಳಿಗೆರೆಯು ಎಸಳಾಗಿ
ಹಬ್ಬಿಹಸರಲು ಮತ್ತೆ ಕರ್ಬೊಗೆಯೆ ಬಿಳಿದಾಗೆ,
ಮೇಲೇರಿ ಮೇಲೇರಿ ಕಣ್ಣ ಕಾಣ್ಕೆಯ ಮೀರಿ
ಅಕ್ಷೋಭವಹನಂತ ಅತ್ಯಂತತೆಯನೈದೆ,
ಅಗ್ನಿ ಪಾವನವಾಯ್ತು. ಗಂಧವಾಹಕವಂತೆ —
ಶ್ರೀಮಂತ ಗೌರವದ ಭರದಿಂದ ಬೀಸಿತ್ತು.
ಧವಳ ಧೂಮಸ್ತಂಭ ಚಿತೆಯಿನಾಗಸವೇರೆ,
ಕವಿದ ತೂಲಾಭ್ರಾಳಿಯೊಡೆದು ಸುತ್ತಲು ಚೆದರೆ,
ರವಿಯ ಕಿರಣ ವಿಕಿರಣ ಸಪ್ತವರ್ಣಂ ಕ್ರಮಣ
ದಿವದುತ್ತರದ ದಿಕ್ತಟದಿ ಕೂಡಿ ಪಡಿಮೂಡಿ
ಇಂದ್ರಚಾಪವು ಕಂಗೊಳಿಸಿತು ನಿರ್ಜರ ಕಾಂತೆ—
ಯರ ಕಣ್ಣಿನಿಂ ಜಗುಳ್ವ ಬಾಷ್ಪಾಂಬುವೆನುವಂತೆ
ತಳಿದಿತ್ತು ಸುಮವೃಷ್ಟಿಯಾಗಿ ತಂಪಲ್ಮಳೆಯು.

ವ್ಯಾಸರ್ಷಿ ರಸಋಷಿಯು ಬ್ರಹ್ಮರ್ಷಿಯಾದರೂ
ಮಾದ್ರಿಯಂತ್ಯವನೇಕೊ! ‘ಮರಣ’ವೆಂದೊರೆದರೂ,
ಪ್ರೇಮ ಪುತ್ಥಳಿಗಳನ್ನೊಡೆಯಲೆಳಸಿದ ಮೃತ್ಯು
ಮಡಿಯಿತೆನುವುದು ಯುಕ್ತ! ಅವಳ ನಲ್ಮೆಯ ಕಡಲು
ಸೃಷ್ಟಿಯಂಗಾಂಗದಲಿ ಇಂದಿಗೂ ಮೊರೆಯುತಿದೆ;
ಒಲವಿನೆದೆ ಭಾಂಡದಲಿ ಹಾಲುಕ್ಕಿ ಹರಿಯುತಿದೆ;
ಎಲ್ಲಿ ಈ ಮೃತ್ಯು ಭೂಮಿಯ ವಿಷಮಕುಂಡದಲಿ
ಕ್ರೋಧ ಕಾರ್ಪಣ್ಯ ರೋದನಗಳುರಿಗೊಳುವವೋ,
ಎಲ್ಲಿ ಕಣ್ಣೀರು ದಾರಿದ್ರ್ಯ ದೈನ್ಯತೆಗಳಲಿ
ನೊಂದವರ ಎದೆಯಾಳ ಮಸಣವಾಗಿರುವುದೋ,
ಒಂದು ಗಳಿಗೆಯೊಳಲ್ಲಿಯಾದರೂ ಪ್ರೇಮರಸ

ಬಿಂದು ಹರಿಯಲಿ, ಸರ್ವಸ್ವವ ಮರೆಯಲಿ, ಎಂದು
ನಿಂದಿಹಳು ಜನಜನದ ಮನಮನದ ಮೂಲದಲಿ.
ಪ್ರಕೃತಿಯವತಾರವೇ ರೂಪೊಡೆದು ಸೃಷ್ಟಿಯಲಿ
ಪ್ರೇಮ ಪಾತವನೊರೆವುದಕ್ಕೆ ಈಕೆಯೆ ಸಾಕ್ಷಿ;
ಮಾದ್ರಿ — ಆಹಾ! ನಿರ್ವಿಯೋಗಾದ್ರಿ ಶೃಂಗದಲಿ
ಹಾದಿತೋರುವ ನಿರ್ವಿಕಾರ ದಿವ್ಯಜ್ಯೋತಿ!!
ಸಾಧ್ವಿಯರ ಸಚ್ಚರಿತದಧ್ಯಾಯವಂ ಬೆಳಗೆ
ಆದಿಯಲಿ 'ಸ್ವರ್ಣಶೀರ್ಷಿಕೆ'ಯವಳ ಚಿತೆಯಗ್ನಿ!

— ಸಂಪೂರ್ಣ —

"ಈ 'ಕ್ಷಾತ್ರದರ್ಶನ'ವು ಮಿಶ್ರಛಂದದಲ್ಲಿ ಹೆಣೆದಿರುವ ಒಂದು ಅತ್ಯುತ್ತಮ ಕಾವ್ಯವಾಗಿದೆ. ಶ್ರೀ ಅ. ಗೌ. ಕಿನ್ನಿಗೋಳಿ ಅವರು ಕಾಲಕಾಲಕ್ಕೆ ಪದ್ಯ, ಖಂಡ ಕಾವ್ಯ, ಗಂಭೀರ ಲೇಖನಗಳನ್ನು ಬರೆದು ಕನ್ನಡಿಗರಿಗೆ ತಮ್ಮ ಕವಿತ್ವದ ಕೆಚ್ಚನ್ನು ಉಣಿಸಿದ್ದಾರೆ. ಈ ಕ್ಷಾತ್ರದರ್ಶನವು ಅವರ ಕಾವ್ಯಶಕ್ತಿಯ ಘನತೆಯನ್ನು ಇನ್ನೂ ಹೆಚ್ಚಾಗಿ ಬೆಳಗಿಸುತ್ತದೆ. ......ಅವರ ಶೈಲಿಯಲ್ಲಿ, ಚಿಕ್ಕ ವಾಕ್ಯಗಳಲ್ಲಿ ವಿಶಾಲವಾದ ಅರ್ಥವನ್ನೂ ಆಳವಾದ ತತ್ವಗಳನ್ನೂ ಪೋಣಿಸುವ ಕುಶಲತೆಯಿದೆ. ಉಪಮಾಲಂಕಾರ ಗಳಂತೂ ಹೊಚ್ಚಹೊಸತಾಗಿ ನೂರುಗಟ್ಲೆ ಸೂರೆಯಾಗಿ ಎಷ್ಟೋ ಸಲ ರವೀಂದ್ರರ ನೆನಪುಕೊಡುತ್ತಿವೆ. ಬಭ್ರುವಾಹನ, ಚಿತ್ರಾಂಗದೆಯರು ಕವಿಗಳ ಕುಂಚದ ಮೂಲಕ ಭಾರತೀಯ ಆದರ್ಶಪುತ್ರತ್ವ, ಆದರ್ಶ ಪತ್ನಿ-ಮಾತೃತ್ವಗಳನ್ನು ಬೆಳಗಿಸಿ ತೊಳಗಿ ದ್ದಾರೆ......"

—ಕಲಿಯುಗ. ಮಂಗಳೂರು.

"......ಶ್ರೀ ಅ. ಗೌ. ಕಿನ್ನಿಗೋಳಿಯವರು ನಮ್ಮ ಜಿಲ್ಲೆಯ ಕನ್ನಡ ಸಾಹಿ ತ್ಯಕ್ಕೆ ಅಧುನಿಕ ಕಾಲದಲ್ಲಿ ಅರ್ಪಿಸಿರುವ ಕೆಲವೇ ಕವಿಗಳ- ಕಡೆಂಗೋಡ್ಲು, ವೆಂಕಟ ರಾಜ, ಕಿಞ್ಞಣ್ಣ ರೈ, ಸೇಡಿಯಾಪು ಇಂಥವರ- ಸಾಲಿಗೆ ಸೇರತಕ್ಕವರು. ......ಹಳೆ ಗನ್ನಡದ ನುಡಿಗಟ್ಟುಗಳನ್ನೂ, ದಕ್ಷಿಣ ಕನ್ನಡ ಜಿಲ್ಲೆಯ ಭಾವಪೂರ್ಣವಾದ ದೇಸಿ ಯನ್ನೂ ಉಳಿಸುವ ಮಹತ್ವದ ಕಾರ್ಯವು ಈ ಮಿಶ್ರಛಂದ ಕಾವ್ಯದಿಂದ ಜಯಪ್ರದ ವಾಗಿದೆ. ಇಲ್ಲಿರುವ ರಚನೆ ಹೊಸದು; ರಾಷ್ಟ್ರಕವಿ ಹೇಳುವಂತೆ "ಜೈಮಿನಿ ಮನಗಾ ಣದ, ಲಕ್ಷ್ಮೀಶನು ಕನಗಾಣದ ಸನ್ನಿವೇಶ" ಇಲ್ಲಿದೆ. ಅದನ್ನು ವಿಸ್ತರಿಸಿರುವ ಕಾವ್ಯ ಗುಣವೂ ಉತ್ತಮಶ್ರೇಣಿಯದ್ದಾಗಿದೆ......."

—ರಾಯಭಾರಿ. ಉಡುಪಿ.

"......ಶ್ರೀ ಕಿನ್ನಿಗೋಳಿಯವರು ವಿಷಯವನ್ನು ನವೀನವಾಗಿಯೂ ಚೆನ್ನಾ ಗಿಯೂ ವಿವರಿಸಿದ್ದಾರೆ. ಅವರ ಕಲ್ಪಕತೆಯು ಹೊಸ ಹೊಸ ವಿಚಾರ ಮತ್ತು ಶಬ್ದ ಪ್ರಯೋಗಗಳಿಂದ ಮನೋಹರವಾಗಿ ವ್ಯಕ್ತವಾಗಿದೆ. ಈ ಪ್ರಯತ್ನವೇ ದೊಡ್ಡದಾಗಿ ಬೆಳೆದರೆ ಮಹಾಕಾವ್ಯವೆನಿಸಿಕೊಳ್ಳುತ್ತದೆ. ಶ್ರೀ ಕಿನ್ನಿಗೋಳಿಯವರ ಕವಿತಾಶಕ್ತಿ ಯಿಂದ ಇಂತಹ ಅನಂತ ಕಾವ್ಯಗಳು ಹೊರಬೀಳುವಂತಾಗಲೆಂದು ನಾವು ಹಾರೈಸು ತ್ತೇವೆ......."

—ಜಯಹಿಂದ. ಹುಬ್ಬಳ್ಳಿ.

"......ಈ ಕ್ಷಾತ್ರದರ್ಶನದ ಪ್ರಕಾಶನದಿಂದ ದಕ್ಷಿಣ ಕನ್ನಡದಲ್ಲಿ ನಾವು ಇನ್ನೊಬ್ಬ ಉತ್ತಮ ಕವಿಯನ್ನು ನೆನಪಿನಲ್ಲಿಡುವಂತಾಯ್ತು. .........ಪುಸ್ತಕವನ್ನು ಓದುತ್ತಾ ಭಾವಸೌಂದರ್ಯದ ರಸಾನಂದದಲ್ಲಿ ಮಗ್ನನಾಗಿ ಮೌನವಾಗಿ ಸುಖಿಸುವಂ ತಾಯ್ತು. ಭಾವ ಪರಿಪುಷ್ಟಿ, ರಸಸ್ಫುರಣೆ, ಅಲಂಕಾರ ಪರಿಪಾಕಗಳಿಂದ ತುಂಬಿರುವ ಈ ಕಾವ್ಯವು ಆಧುನಿಕ ಕವಿತೆಗೊಂದು ತೊಡವು......."

—ಕವಿ, ಅಮ್ಮೆಂಬಳ ಶಂಕರನಾರಾಯಣ.

# 'ಚಿತಾಗ್ನಿ' - ಒಂದು ಉತ್ತಮ ಖಂಡಕಾವ್ಯ.

## ಶ್ರೀ। ಕಯ್ಯಾರ ಕಿಂಞಣ್ಣ ರೈಗಳು.

* * * * * * * *

............... "ಮೇಲೆ ಉದ್ಧರಿಸಿದ ಕಾವ್ಯಖಂಡವನ್ನು ಬರೆದವರು ಗೋವಿಂದ ಪೈಯಲ್ಲ, ಕುವೆಂಪುವಲ್ಲ, ಬೇಂದ್ರೆ, ಕಡೆಂಗೋಡ್ಲು ಇವರು ಯಾರೂ ಅಲ್ಲ. ದಕ್ಷಿಣ ಕನ್ನಡದ ಕಿನ್ನಿಗೋಳಿ ಎಂಬಲ್ಲಿ – ಎಲೆಯ ಮರೆಯ ಕಾಯಿಯಂತೆ – ಇನ್ನೂ ಹೆಚ್ಚು ಜನರ ಗಮನಕ್ಕೆ ಬಾರದೆ, ಅದನ್ನು ಬಯಸದೆ, ಕಳೆದ ಕೆಲವು ವರ್ಷಗಳಿಂದಲೂ ಕವಿತೆಗಳನ್ನು ಬರೆಯುತ್ತಿರುವ ಇಂದಿನ ಪ್ರತಿಭಾನ್ವಿತ ಕವಿಗಳಲ್ಲೊಬ್ಬರು, ಶ್ರೀ। ಅ. ಗೌ. ಕಿನ್ನಿಗೋಳಿ ಇವರು; ಸಾಹಿತ್ಯ ಸಂಪತ್ತನ್ನು ಗಳಿಸಿಕೊಂಡಿರುವ ವಿದ್ವಾಂಸರಾದ ಉಪಾಧ್ಯಾಯರು.

............... "ಚಿತಾಗ್ನಿ ಓದುಗರ ಎದೆಯಲ್ಲಿ ಅಳಲ ಬೆಂಕಿಯನ್ನು ಹುಟ್ಟಿಸುತ್ತದೆ. ಒಂದು ಉತ್ತಮ ಕಾವ್ಯವನ್ನು ಓದಿದಾಗ ಉಂಟಾಗುವ ಹೃದಯಾನುಭೂತಿ ಒಡಮೂಡುತ್ತದೆ.

"ಕಾವ್ಯದ ಉದ್ದಕ್ಕೂ ಬರುವ ಹಲವಾರು ವರ್ಣನೆಗಳು, ವ್ಯಥೆಗಳು, ನೊಂದವರ ನೋವಿನ ಕಥೆಗಳು, ಕೊನೆಯ ಕರುಣಾರಸ ಪ್ರವಾಹ ಇವುಗಳು ರಸಿಕರ ಮನಸ್ಸನ್ನು ಸೂರೆಗೊಳ್ಳುವವು.

..............."ಶ್ರೀ। ಅ. ಗೌ. ಕಿನ್ನಿಗೋಳಿ ಇವರು ನಮ್ಮ ನಾಡಿನ ಉತ್ತಮ ಕವಿಗಳಲ್ಲಿ ಒಬ್ಬರು; ಪ್ರತಿಭಾನ್ವಿತ ಕವಿಗಳು. ಅವರ ಓಜಸ್ವೀ ಲೇಖನಿಯು ಕನ್ನಡ ನಾಡಿಗೆ ಉತ್ತಮ ಕಾವ್ಯಗಳನ್ನು ಒದಗಿಸಿಕೊಡಲೆಂದೂ, ರಸಿಕರ ಮೆಚ್ಚುಗೆ ದೊರಕಲೆಂದೂ ಹಾರೈಸುವೆವು."

(೧೯೫೨ರಲ್ಲಿ ಬರೆದ ವಿಸ್ತೃತ ವಿಮರ್ಶೆಯಿಂದ —)